RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜೂನ್ ೨೭, ೨೦೧೩ (ಆಷಾಢ ೬, ಶಕ ವರ್ಷ ೧೯೩೫)<br>Bangalore, Thursday, June 27, 2013 (Ashadha 6, Shaka Varsha 1935) | ಸಂಚಿಕೆ ೨೬<br>Issue 26 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** 2012-13ನೇ ಸಾಲಿಗೆ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗೆ ಯೋಜನೇತರ ಅಡಿಯಲ್ಲಿ ಕೊರತೆಯಾಗಿರುವ ಅನುದಾನವನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಐ 67 ಎಸ್‌ಎಲ್‌ವಿ 2011, ದಿನಾಂಕ: 06-06-2012
2. ಸರ್ಕಾರದ ಆದೇಶ ಸಂಖ್ಯೆ: ಸಿಐ 67 ಎಸ್‌ಎಲ್‌ವಿ 2011, ದಿನಾಂಕ: 16-08-2012
3. ಸರ್ಕಾರದ ಆದೇಶ ಸಂಖ್ಯೆ: ಸಿಐ 67 ಎಸ್‌ಎಲ್‌ವಿ 2011, ದಿನಾಂಕ: 26-12-2012
4. ಸರ್ಕಾರದ ಆದೇಶ ಸಂಖ್ಯೆ: ಸಿಐ 67 ಎಸ್‌ಎಲ್‌ವಿ 2011, ದಿನಾಂಕ: 15-03-2013
5. ಸರ್ಕಾರದ ಆದೇಶ ಸಂಖ್ಯೆ: ಸಿಐ 67 ಎಸ್‌ಎಲ್‌ವಿ 2011, ದಿನಾಂಕ: 16-02-2012
6. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರು ಪತ್ರ ಸಂಖ್ಯೆ: ಖಾಮಂ:ಲೆಪವಿ:ಸಂಕಲನ:ಕೊ:ಅ:99:2012-13, ದಿನಾಂಕ: 19-01-2012

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಿಂದ (4) ರಲ್ಲಿ ಅನುಕ್ರಮವಾಗಿ ಓದಲಾದ ಸರ್ಕಾರದ ಆದೇಶಗಳಲ್ಲಿ 2012-13ನೇ ಸಾಲಿಗೆ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ಲೆಕ್ಕ ಶೀರ್ಷಿಕೆ 2851-00-105-0-01-101 ಯೋಜನೇತರ (ಸಹಾಯಾನುದಾನ) ರಡಿ ಒದಗಿಸಲಾಗಿದ್ದ ರೂ. 1200.00 ಲಕ್ಷಗಳನ್ನು ತಲಾ ರೂ. 300.00 ಲಕ್ಷಗಳಂತೆ ನಾಲ್ಕು ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (5)ರಲ್ಲಿ 1998-99ನೇ ಸಾಲಿನಿಂದ 2010-11ನೇ ಸಾಲಿನವರೆಗೆ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ಕೊರತೆ ಅನುದಾನದಲ್ಲಿ 2011-12ನೇ ಸಾಲಿನ ಪೂರಕ ಅಂದಾಜು (3ನೇ ಕಂತು) ಆಯವ್ಯಯದ ಲೆಕ್ಕಶೀರ್ಷಿಕೆಯಡಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (6)ರಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಇವರು ಮಂಡಳಿಯ ಸಿಬ್ಬಂದಿಯವರು ಕರ್ನಾಟಕ ರಾಜ್ಯ ಸರ್ಕಾರದ ನೌಕರರಂತೆ ಪಿಂಚಣಿ ಸೌಲಭ್ಯವುಳ್ಳವರಾಗಿದ್ದು, ಈ ಬಾಬ್ತಿನ ಪೂರ್ಣ ಪ್ರಮಾಣದ ವೆಚ್ಚಗಳಿಗಾಗಿ ಸರ್ಕಾರವು ತ್ರೈಮಾಸಿಕ ಕಂತುಗಳಲ್ಲಿ ಯೋಜನೇತರ ಬಾಬ್ತಿನಿಂದ ಅನುದಾನವನ್ನು ಬಿಡುಗಡೆ ಮಾಡುತ್ತಿದ್ದು, ಆದರೆ 1998-99ನೇ ಸಾಲಿನಿಂದ ಯೋಜನೇತರ ಬಾಬ್ತಿನ ಪೂರ್ಣ ಪ್ರಮಾಣದ ವೆಚ್ಚದ ಮೊತ್ತವನ್ನು ಸರ್ಕಾರವು ಬಿಡುಗಡೆ ಮಾಡುತ್ತಿಲ್ಲವೆಂದೂ, 1998-99ನೇ ಸಾಲಿನಿಂದ 2010-11ನೇ ಸಾಲಿನವರೆಗೆ ಮಂಡಳಿಯಲ್ಲಿ ನಿರ್ವಹಿಸಲಾದ ಯೋಜನೇತರ ಬಾಬ್ತಿನ ವೆಚ್ಚದ ಕೊರತೆ ಮೊತ್ತ ರೂ. 1002.11 ಲಕ್ಷಗಳ ಪೈಕಿ ಮೇಲೆ ಓದಲಾದ ಕ್ರಮಾಂಕ (5)ರ ಸರ್ಕಾರದ ಆದೇಶದಲ್ಲಿ 2011-12ನೇ ಸಾಲಿನಲ್ಲಿ ರೂ. 100.00 ಲಕ್ಷಗಳನ್ನು ಮಾತ್ರ ಬಿಡುಗಡೆ ಮಾಡಲಾಗಿದ್ದು, ಮಂಡಳಿಯ ಎಲ್ಲಾ ವೆಚ್ಚಗಳು ಅವಶ್ಯ ಹಾಗೂ ಅನಿವಾರ್ಯವಾಗಿ ನಿರ್ವಹಿಸಬೇಕಾದ ವೆಚ್ಚಗಳಾಗಿರುವುದರಿಂದ ಹಾಗೂ ಮಂಡಳಿಯು ಸರ್ಕಾರದ ಅನುದಾನವನ್ನೇ ಅವಲಂಭಿಸಿರುವುದರಿಂದ 1998-99ನೇ ಸಾಲಿನಿಂದ 2010-11ನೇ ಸಾಲಿನವರೆಗಿನ ಕೊರತೆ ಅನುದಾನ ರೂ. 902.11 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2851-00-105-0-01-101 ಯೋಜನೇತರ (ಸಹಾಯಾನುದಾನ) ರಡಿ ಮಂಜೂರು ಮಾಡಿ, ಬಿಡುಗಡೆ ಮಾಡಲು ಆರ್ಥಿಕ ಇಲಾಖೆಗೆ ಶಿಫಾರಸ್ಸು ಮಾಡುವಂತೆ ಕೋರಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 67 ಎಸ್‌ಎಲ್‌ವಿ 2011, ಬೆಂಗಳೂರು, ದಿನಾಂಕ: 27ನೇ ಮಾರ್ಚ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ಸಿಬ್ಬಂದಿ ವೇತನ ಪರಿಷ್ಕರಣೆ ಹಾಗೂ ನಿವೃತ್ತ ನೌಕರರ ಪಿಂಚಣಿ ಸೌಲಭ್ಯಗಳನ್ನು ಭರಿಸಲು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ: 2851–00–105–0–01–[ಯೋಜನೇತರ]–101–(ಸಹಾಯಾನುದಾನ) ರೂ. 105.00 ಲಕ್ಷ [ಒಂದು ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ] ಗಳನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಹಣ ಸ್ವೀಕೃತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಯಿಂದ ಹಣ ಪಡೆಯಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

**ಷರತ್ತುಗಳು:**

1. ಸದರಿ ಅನುದಾನವನ್ನು ಯಾವ ಉದ್ದೇಶಕ್ಕಾಗಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಮಾತ್ರ ಬಳಸತಕ್ಕದ್ದು. ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
2. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ಸದರಿ ಮಂಡಳಿಯ ಅನುದಾನವನ್ನು ಸದ್ಬಳಕೆ ಮಾಡುತ್ತಿದೆಯೇ ಎಂಬ ಬಗ್ಗೆ ಮಂಡಳಿಯ ಕಾರ್ಯಕ್ಷಮತೆಯನ್ನು ಖಚಿತಪಡಿಸಿಕೊಂಡು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.
3. ಹಣ ವೆಚ್ಚ ಮಾಡಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು [Utilization Certificate] ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಹಾಗೂ ಸರ್ಕಾರಕ್ಕೆ ತಪ್ಪದೇ ಸಲ್ಲಿಸತಕ್ಕದ್ದು.

ಈ ಆದೇಶದಲ್ಲಿ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 413 Exp-1/13, ದಿನಾಂಕ: 23–03–2013ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012, ದಿನಾಂಕ: 27–04–2012ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಮುಂದುವರೆದು, ಕರ್ನಾಟಕ ರಾಜ್ಯದ ಮುಖ್ಯ ಚುನಾವಣಾಧಿಕಾರಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಚುನಾವಣೆಗಳು) ಇವರು ದಿನಾಂಕ: 27–03–2013ರಂದು ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಎಸ್. ಶ್ರೀಕಂಠಬಾಬು,**
ಸರ್ಕಾರದ ಅಧೀನ ಕಾರ್ಯದರ್ಶಿ [ಸಪ್ರಕೈ],
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**P.R. 601**

## ವಸತಿ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಸಿಬ್ಬಂದಿ ವೆಚ್ಚಕ್ಕಾಗಿ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ವಇ 29 ಕೊಮಂಲೆ 2012, ದಿನಾಂಕ: 21–06–2012, 14–09–2012 & 16–11–2012
2. ಸರ್ಕಾರದ ಆದೇಶ ಸಂಖ್ಯೆ: ವಇ 15 ಕೊಮಂಲೆ 2012, ದಿನಾಂಕ: 11–06–2012
3. ಆಯುಕ್ತರು, ಕಕೊಆಮ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಕೊಆಮ:ಲೆಪಶಾ:ಅನುದಾನ:2012–2013: ದಿನಾಂಕ: 28–01–2013
4. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:4:ಟಿಎಫ್‌ಪಿ:2012, ಬೆಂಗಳೂರು, ದಿನಾಂಕ: 27–04–2012
5. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:8:ಟಿಎಫ್‌ಪಿ:2012, ಬೆಂಗಳೂರು, ದಿನಾಂಕ: 04–10–2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶಗಳಲ್ಲಿ 2012–13ನೇ ಸಾಲಿನ ಮೊದಲನೇ, ಎರಡನೇ ಹಾಗೂ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 1119.51 ಲಕ್ಷಗಳು, ಕೊಳಚೆ ಸುಧಾರಣೆ–ಸಹಾಯಧನ–ಯೋಜನೆಯಡಿ ರೂ. 3821.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ – ಯೋಜನೇತರಡಿಯಲ್ಲಿ ರೂ. 946.87 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 4233.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 1653.88 ಲಕ್ಷಗಳು ಒಟ್ಟು ರೂ. 5887.38 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2) ರಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ JnNURM-BSUP ಯೋಜನೆಯಡಿ ಪ್ರಾರಂಭಿಸದೇ ಇರುವ 4742 ಮನೆಗಳಿಗೆ ಹೆಚ್ಚುವರಿ ಅನುದಾನಗಳ ಪೈಕಿ ವಸತಿ ಇಲಾಖೆಯ ಶೇಕಡ 50 ರಷ್ಟು ಅನುದಾನ ರೂ. 1804.00 ಲಕ್ಷಗಳನ್ನು ಕೊಳಚೆ ಸುಧಾರಣೆ–ಸಹಾಯಧನ–ಯೋಜನೆಯಡಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿರವರ ಪತ್ರದಲ್ಲಿ 2012–2013ನೇ ಸಾಲಿನ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 373.17 ಲಕ್ಷಗಳು, ಕೊಳಚೆ ಸುಧಾರಣೆ –ಸಹಾಯಧನ–ಯೋಜನೆಯಡಿ ರೂ. 1875.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ – ಯೋಜನೇತರಡಿಯಲ್ಲಿ ರೂ. 300.12 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 2012.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 535.79 ಲಕ್ಷಗಳು ಒಟ್ಟು ರೂ. 2548.29 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (5) ರ ಆರ್ಥಿಕ ಇಲಾಖೆಯ ಆದೇಶಗಳಲ್ಲಿ ಸಿಬ್ಬಂದಿ ವೆಚ್ಚಗಳಿಗೆ ಆಯವ್ಯಯದಲ್ಲಿ ಒದಗಿಸಲಾದ ಮೊತ್ತದವರೆಗೆ ಆರ್ಥಿಕ ಇಲಾಖೆಯ ಅನುಮತಿ ಇದೆಯೆಂದು ಭಾವಿಸಿ ಹಣವನ್ನು ಬಿಡುಗಡೆ ಮಾಡಬಹುದಾಗಿದೆ.

ಸರ್ಕಾರವು, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ ಹಾಗೂ ಆರ್ಥಿಕ ಇಲಾಖೆಯ ಆದೇಶದನ್ವಯ ನಾಲ್ಕನೇ ತ್ರೈಮಾಸಿಕ ಕಂತಿನ ಸಿಬ್ಬಂದಿ ವೆಚ್ಚದ ಅನುದಾನವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ:–

**ಸರ್ಕಾರದ ಆದೇಶ ಸಂಖ್ಯೆ: ವಇ 29 ಕೊಮಂಲೆ 2012, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ 2012–13ನೇ ಸಾಲಿನ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನವನ್ನು ಸಿಬ್ಬಂದಿ ವೆಚ್ಚಕ್ಕಾಗಿ (ಯೋಜನೆ ಮತ್ತು ಯೋಜನೇತರ) ಈ ಕೆಳಕಂಡ ಲೆಕ್ಕಶೀರ್ಷಿಕೆಗಳಲ್ಲಿ ಒಟ್ಟು ರೂ. 373.17 ಲಕ್ಷಗಳು (ಮೂರು ಕೋಟಿ ಎಪ್ಪತ್ತಮೂರು ಲಕ್ಷದ ಹದಿನೇಳು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಈ ಅನುದಾನವನ್ನು ಕೆಳಕಂಡ ನಿಬಂಧನೆಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವ ಷರತ್ತಿನೊಂದಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

| ಕ್ರ.ಸಂ. | ಲೆಕ್ಕ ಶೀರ್ಷಿಕೆ | ನಾಲ್ಕನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1 | ಸಿಬ್ಬಂದಿ ವೆಚ್ಚ 2217–04–191–2–01–101 | 137.50 | 235.67 | 373.17 |
| | **ಒಟ್ಟು** | **137.50** | **235.67** | **373.17** |

**ನಿಬಂಧನೆಗಳು:**

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರ ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕ ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.
5. ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಎಫ್‌ಡಿ/4/ಟಿಎಫ್‌ಪಿ/12, ದಿನಾಂಕ: 27–04–2012 ಹಾಗೂ ಎಫ್‌ಡಿ/8/ಟಿಎಫ್‌ಪಿ/2012, ದಿನಾಂಕ: 04/10/2012 ಆದೇಶಗಳಲ್ಲಿ ತಿಳಿಸಿರುವಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ:4:ಟಿಎಫ್‌ಪಿ:2012, ದಿನಾಂಕ: 27–04–2013 ಹಾಗೂ ಸಂಖ್ಯೆ: ಎಫ್‌ಡಿ:8:ಟಿಎಫ್‌ಪಿ:2012, ಬೆಂಗಳೂರು, ದಿನಾಂಕ: 04–10–2012 ಆದೇಶಗಳಲ್ಲಿ ಆರ್ಥಿಕ ಇಲಾಖೆಯವರು ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರ ಚಲಾಯಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗಣ್ಣ,**
ಪೀಠಾಧಿಕಾರಿ–4,
ವಸತಿ ಇಲಾಖೆ.

P.R. 602

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ವೈ.ಆರ್. ಚೌಧರಿ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಇವರ ವೇತನವನ್ನು ರಕ್ಷಣೆ ಮಾಡುವ ಬಗ್ಗೆ ಮತ್ತು ಸರ್ಕಾರದ ಆದೇಶದ ಮೊದಲನೇ ಪ್ಯಾರಾದಲ್ಲಿ ಕಡೆಯ ಸಾಲಿನ ವಿಲೀನಗೊಳಿಸಲು ಎಂಬುದರ ಬದಲಾಗಿ ವಿಲೀನಗೊಳಿಸಿ ಎಂದು ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಕಇ 158 ಪಕಸೇ 2012, ದಿನಾಂಕ 14–12–2012
2. ಶ್ರೀ ವೈ.ಆರ್. ಚೌಧರಿ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಇವರ ದಿನಾಂಕ: 26–02–2013ರ ಮನವಿ

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಶ್ರೀ ವೈ.ಆರ್. ಚೌಧರಿ, ಉಪನ್ಯಾಸಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 16(ಎ) (ii) ಮೇರೆಗೆ ಸಮಾಜ ಕಲ್ಯಾಣ ಇಲಾಖೆಯಲ್ಲಿನ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಯ ನೇರ ನೇಮಕಾತಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ ಅವರ ವೇತನವನ್ನು ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಯ ಹುದ್ದೆಯ ಕಾಲಿಕ ವೇತನ ಶ್ರೇಣಿ 22800–43200ರ ಕನಿಷ್ಠ ವೇತನಕ್ಕೆ ನಿಗಧಿಗೊಳಿಸಲಾಗಿದೆ.

ಏತನ್ಮಧ್ಯೆ, ಮೇಲೆ ಓದಲಾದ ಕ್ರಮಸಂಖ್ಯೆ (2)ರ ಮನವಿಯಲ್ಲಿ ಉಪನ್ಯಾಸಕರ ಹುದ್ದೆ ಮತ್ತು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಹುದ್ದೆ ಸಮಾನಾಂತರ ಹುದ್ದೆಯಾಗಿರುವುದರಿಂದ ದಿನಾಂಕ: 14–12–2012ರ ಆದೇಶದಲ್ಲಿ ತಮ್ಮ ವೇತನವನ್ನು ಕನಿಷ್ಠ ವೇತನಕ್ಕೆ ನಿಗಧಿಪಡಿಸಿರುವುದನ್ನು ಸರಿಪಡಿಸುವಂತೆ ಕೋರಿದ್ದಾರೆ.

ಸದರಿ ಅಧಿಕಾರಿಯು ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 16(ಎ) (ii) ರನ್ವಯ ಸಮಾನಾಂತರ ಹುದ್ದೆಯಲ್ಲಿ ನೇಮಕಗೊಂಡಿರುವುದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ (ಕೆಸಿಎಸ್‌ಆರ್) 50ರಲ್ಲಿ ನೀಡಿರುವ ಅವಕಾಶದಂತೆ ಸದರಿಯವರ ವೇತನವನ್ನು ಸರಿಪಡಿಸಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 158 ಪಕಸೇ 2012, ಬೆಂಗಳೂರು, ದಿನಾಂಕ: 20ನೇ ಮಾರ್ಚ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ದಿನಾಂಕ: 14–12–2012ರ ಸರ್ಕಾರಿ ಆದೇಶ ಸಂಖ್ಯೆ: ಸಕಇ 158 ಪಕಸೇ 2012ರ ಆದೇಶ ಭಾಗದಲ್ಲಿನ 2ನೇ ಷರತ್ತನ್ನು ರದ್ದುಪಡಿಸಿ ಅದರ ಬದಲಿಗೆ ಈ ಕೆಳಕಂಡ ಷರತ್ತನ್ನು ಸೇರ್ಪಡೆ ಮಾಡಿ ದಿನಾಂಕ: 14–12–2012ರಿಂದ ಪೂರ್ವಾನ್ವಯವಾಗುವಂತೆ ಆದೇಶಿಸಲಾಗಿದೆ.

**(2)** "1977ರ ಕೆ.ಸಿ.ಎಸ್.ಆರ್. ನಿಯಮ 50ರ ಉಪನಿಯಮ (1)ರ ಅಡಿಯಲ್ಲಿ ಕಲ್ಪಿಸಲಾಗಿರುವ ಅವಕಾಶದಂತೆ ಶ್ರೀ ವೈ.ಆರ್. ಚೌಧರಿ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಇವರು ಸಮಾಜ ಕಲ್ಯಾಣ ಇಲಾಖೆಯ ಸೇವೆಗೆ ದಿನಾಂಕ: 14–12–2012ರ ಸರ್ಕಾರಿ ಆದೇಶ ಸಂಖ್ಯೆ: ಸಕಇ 158 ಪಕಸೇ 2012ರನ್ವಯ ಖಾಯಂ ಆಗಿ ವಿಲೀನಗೊಂಡ ಅವಧಿಯಲ್ಲಿ ಪಡೆಯುತ್ತಿದ್ದ ಕಾಲಿಕ ವೇತನ ಶ್ರೇಣಿಯ ವೇತನಕ್ಕೆ ಅನುಗುಣವಾಗಿ ರಕ್ಷಣೆ (protection) ನೀಡಲಾಗಿದೆ.

ಉಳಿದಂತೆ ದಿನಾಂಕ: 14–12–2012ರ ಸರ್ಕಾರಿ ಆದೇಶದಲ್ಲಿನ ಇತರೆ ಷರತ್ತುಗಳು ಯಥಾವತ್ತಾಗಿ ಚಾಲ್ತಿಯಲ್ಲಿರುತ್ತದೆ.

(3) ಮುಂದುವರಿದು, ಸರ್ಕಾರದ ಆದೇಶ ಸಂಖ್ಯೆ: ಸಕಇ 158 ಪಕಸೇ 2012 ದಿನಾಂಕ: 14–12–2012ರಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಯ ನೇರ ನೇಮಕಾತಿ ಹುದ್ದೆಯಲ್ಲಿ ಖಾಯಂ ಆಗಿ "ವಿಲೀನಗೊಳಿಸಲು" ಸರ್ಕಾರವು ಆದೇಶಿಸಿದೆ ಎಂಬುದರ ಬದಲಿಗೆ "ವಿಲೀನಗೊಳಿಸಿ" ಸರ್ಕಾರವು ಆದೇಶಿಸಿದೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿದ್ದಿಕ್ ಪಾಷ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಮಾಜ ಕಲ್ಯಾಣ ಇಲಾಖೆ.

P.R. 603

## ಯುವಜನ ಸೇವಾ ಸಚಿವಾಲಯ

**ವಿಷಯ:** ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು (ಯುಸೇಕ್ರೀ ಇಲಾಖೆ) ಇವರ ವಿರುದ್ಧ ಮರು ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**

1. ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು ಇವರಿಗೆ ನೀಡಲಾದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಯುಸೇಇ 98 ಯುಇಸೇ 2005, ದಿನಾಂಕ: 01–07–2006
2. ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರ ಉತ್ತರ ದಿನಾಂಕ: 16–06–2007
3. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 98, ಯುಇಸೇ 2005, ದಿನಾಂಕ: 04–08–2010
4. ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರ ಪತ್ರ ಸಂಖ್ಯೆ: ಸಿವೈಎಸ್‌ಎಸ್/ಎಡಿಎಂ/ಸಿಸಿಎ/05–06, ದಿನಾಂಕ: 10–08–2010
5. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 98 ಯುಇಸೇ 2005, ದಿನಾಂಕ: 21–09–2010
6. ಶ್ರೀ ಎಂ.ಜಿ. ಹಿರೇಮಠ್, ವಿಚಾರಣಾಧಿಕಾರಿಗಳು, ಇವರು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 15–07–2011
7. ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು ಇವರಿಗೆ ನೀಡಲಾದ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಯುಸೇಇ 98 ಯುಇಸೇ 2005, ದಿನಾಂಕ: 18–08–2011
8. ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರ ಉತ್ತರ ದಿನಾಂಕ: 03–10–2011
9. ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಿಸಿದ್ದ ಅರ್ಜಿ ಸಂಖ್ಯೆ: 6404/2011

**ಪ್ರಸ್ತಾವನೆ:**

ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರು, ಇಲಾಖೆಯ ಪ್ರಭಾರಿ ಜಂಟಿ ನಿರ್ದೇಶಕರಾದ ಶ್ರೀಮತಿ ಎಂ.ಎಸ್. ಲಲಿತ ಅವರಿಗೆ ವಿಶೇಷ ಸ್ವಯಂ ನಿವೃತ್ತಿ ನೀಡಬಾರದೆಂದು ಅನಗತ್ಯವಾಗಿ ಟಿಪ್ಪಣಿ ಸಲ್ಲಿಸಿ ಸದರಿ ಪ್ರಸ್ತಾವನೆಯನ್ನು ವಿಳಂಬ ಮಾಡಿದ, ಉಪ ನಿರ್ದೇಶಕರ ಹುದ್ದೆಯಲ್ಲಿ ಹೆಚ್ಚುವರಿ ಎಂದು ಗುರುತಿಸಲಾದ ಆರ್. ಮಲ್ಲಿಕಾರ್ಜುನಯ್ಯ, ಹೆಚ್.ಬಿ. ನಂಜೇಗೌಡ, ಹಾಗೂ ರಜಿಯುದ್ದೀನ್ ಅವರುಗಳಿಗೆ ನೀಡಲಾದ ವಿಶೇಷ ಸ್ವಯಂ ನಿವೃತ್ತಿ ಸೌಲಭ್ಯದ ಆದೇಶದ ವಿರುದ್ಧ ಅಕ್ರಮವಾಗಿ ಸರ್ಕಾರದ ವಿರುದ್ಧವೇ ಮಹಾಲೇಖಪಾಲರಿಗೆ ನೇರವಾಗಿ ಪತ್ರ ಬರೆದ, 2004-05ನೇ ಸಾಲಿನ ಜಿಲ್ಲಾ ಪಂಚಾಯತ್ ಯೋಜನೆ ಅಡಿಯಲ್ಲಿ ನಿರ್ವಹಿಸಲಾದ ಯೋಜನೆಗಳ ಲೆಕ್ಕಪತ್ರ ತಪಾಸಣೆ ನಡೆಸಬೇಕೆಂಬ ಮೇಲಾಧಿಕಾರಿ ಆದೇಶವನ್ನು ಧಿಕ್ಕರಿಸಿದ, 12ನೇ ಹಣಕಾಸು ಯೋಜನೆಯಲ್ಲಿ ತಾಲ್ಲೂಕು ಕ್ರೀಡಾಂಗಣಗಳ ಅಭಿವೃದ್ಧಿಗೆ ಅಂದಾಜು ಪಟ್ಟಿ ತಯಾರಿಸಬೇಕೆಂಬ ಮೇಲಧಿಕಾರಿಗಳ ನಿರ್ದೇಶನಗಳನ್ನು ನಿರ್ಲಕ್ಷಿಸಿದ, ತನ್ನ ಮೇಲಾಧಿಕಾರಿಗಳ ವಿರುದ್ಧವೇ ದೂರು ನೀಡಿದ, ಡ್ರಾ ಮಾಡಿದ ಲಕ್ಷಾಂತರ ರೂ.ಗಳ ಹಣವನ್ನು ಸರಿಯಾದ ಖಾತೆಗೆ ಜಮಾ ಮಾಡದೇ, ಲೆಕ್ಕ ಪತ್ರ, ನಗದು ಪುಸ್ತಕಗಳನ್ನು ಸಮರ್ಪಕವಾಗಿ ನಿರ್ವಹಿಸದೇ ಆಡಿಟ್ ಆಕ್ಷೇಪಣೆಗಳಿಗೆ ಕಾರಣರಾದ, ಬೆಳಗಾವಿ ವಿಭಾಗದಲ್ಲಿ ಇಲಾಖೆಯ ಯೋಜನಾ ಕಾರ್ಯಕ್ರಮಗಳಿಗೆ ಬಿಡುಗಡೆಯಾದ ಹಣವನ್ನು ವೆಚ್ಚ ಮಾಡದೇ ಬ್ಯಾಂಕ್ ಖಾತೆಗೆ ಜಮಾ ಮಾಡಿ ದುರ್ನಡತೆ ಎಸಗಿದ ಆರೋಪಗಳಿಗಾಗಿ ಅವರಿಗೆ ಸಿಸಿಎ ನಿಯಮಾವಳಿಗಳನ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ: 01-07-2006ರ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ವಿಚಾರಣೆ ಜಾರಿಯಲ್ಲಿದ್ದಾಗ ದಿನಾಂಕ: 30-04-2007ರಂದು ಸದರಿ ಅಧಿಕಾರಿಯು ವಯೋನಿವೃತ್ತಿ ಹೊಂದಿದರು. ಆ ತರುವಾಯ ಮೇಲೆ (2)ರಲ್ಲಿ ಓದಲಾದ ದಿನಾಂಕ: 16-06-2007ರ ಉತ್ತರವನ್ನು ನೀಡಿ ಸದರಿಯವರು ಆರೋಪಗಳನ್ನು ನಿರಾಕರಿಸಿದ್ದಾರೆ. ಆ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅವು ಸಮರ್ಪಕವಾಗಿಲ್ಲದ ಕಾರಣ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ, ಮೇಲೆ (3)ರಲ್ಲಿ ಓದಲಾದ ದಿನಾಂಕ: 04-08-2010ರ ಆದೇಶದಲ್ಲಿ ಶ್ರೀ ಎಂ.ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಆರ್. ಎಲ್. ಪಾಟೀಲ್, ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು, ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ: 10-08-2010ರ ಪತ್ರದಲ್ಲಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆರವರು ಶ್ರೀ ಆರ್.ಎಲ್. ಪಾಟೀಲ್, ಜಂಟಿ ನಿರ್ದೇಶಕರು ಈ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರ ಪರ ಸಾಕ್ಷಿಗಳಲ್ಲಿ ಒಬ್ಬರಲ್ಲಿ ಹೆಸರಿಸಲ್ಪಟ್ಟಿದ್ದು, ನಿಯಮಾನುಸಾರ ಅವರು ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಅವಕಾಶ ಇರುವುದಿಲ್ಲವೆಂದು ತಿಳಿಸಿದ್ದರಿಂದ, ಮೇಲೆ (5)ರಲ್ಲಿ ಓದಲಾದ ದಿನಾಂಕ: 21-09-2010ರ ಪರಿಷ್ಕೃತ ಆದೇಶದಲ್ಲಿ ಈ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಆರ್.ಎಲ್. ಪಾಟೀಲ್, ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಬೆಂಗಳೂರು ಅವರ ಬದಲಾಗಿ ಶ್ರೀ ಜಿತೇಂದ್ರಶೆಟ್ಟಿ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (6) ರಲ್ಲಿ ಓದಲಾದ ದಿನಾಂಕ: 15-07-2011ರಲ್ಲಿ ಶ್ರೀ ಎಮ್.ಜಿ. ಹಿರೇಮಠ್, ವಿಚಾರಣಾಧಿಕಾರಿಗಳು, ಇವರು ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಂಡು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ, ಆಪಾದಿತರಿಗೆ ಸಾಕಷ್ಟು ಅವಕಾಶಗಳನ್ನು ನೀಡಿದರೂ ಅವರು ಪದೇ ಪದೇ ವಿಚಾರಣೆಗೆ ಗೈರು ಹಾಜರಾಗಿ ಮುಂದೂಡುವ ಪ್ರಯತ್ನ ಮಾಡುತ್ತಿರುವುದು ಕಂಡುಬರುತ್ತದೆ. ಇಲ್ಲಿಯವರೆವಿಗೆ ಆಪಾದಿತರು ತಮ್ಮ ಪ್ರಾಥಮಿಕ ಹೇಳಿಕೆಯನ್ನು ನೀಡಿ, ಅವರ ವಿರುದ್ಧ ಮಾಡಿದ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿರುವುದಿಲ್ಲ. ಕೊನೆಗೆ ಆಪಾದಿತರು ವಿಚಾರಣೆಗೆ ಗೈರು ಹಾಜರು ಆಗಿದ್ದರಿಂದ ಅವರನ್ನು ಗೈರು ಹಾಜರು ಎಂದು ಪರಿಗಣಿಸಿ, ಅವರ ವಿರುದ್ಧ ಮಾಡಿದ ಆರೋಪ 1 ರಿಂದ 6 ರುಜುವಾತಾಗಿವೆ ಎಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ.

ಮೇಲೆ (7) ರಲ್ಲಿ ದಿನಾಂಕ: 18-08-2011ರ ಶ್ರೀ ವಿ. ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರಿಗೆ ನೋಟೀಸ್ ನೀಡುವ ಮೂಲಕ ವಿಚಾರಣಾಧಿಕಾರಿಗಳು, ನಿಯಮಾನುಸಾರ ವಿಚಾರಣೆ ನಡೆಸಿ ಸಲ್ಲಿಸಿರುವ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ವಿಚಾರದಲ್ಲಿ ತಮ್ಮ ಪ್ರತಿರಕ್ಷಣಾ ಹೇಳಿಕೆಯನ್ನು ಈ ನೋಟೀಸು ತಲುಪಿದ 30 ದಿನಗಳ ಒಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು, ಈ ನಿಗಧಿತ ಅವಧಿಯೊಳಗೆ ತಮ್ಮಿಂದ ಯಾವ ಪ್ರತಿರಕ್ಷಣಾ ಹೇಳಿಕೆ ಸ್ವೀಕೃತವಾಗದೇ ಇದ್ದಲ್ಲಿ ನಿಯಮಾನುಸಾರ, ಮುಂದಿನ ಕ್ರಮವನ್ನು ಕೈಗೊಳ್ಳಲಾಗುವುದೆಂದ ತಿಳಿಸಲಾಗಿತ್ತು.

ಮೇಲೆ (8)ರಲ್ಲಿ ಓದಲಾದ ದಿನಾಂಕ: 03-10-2011ರ ಉತ್ತರವನ್ನು ನೀಡಿ ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (23)ಕ್ಕೆ ಅನುಗುಣವಾಗಿರುವುದಿಲ್ಲ. ವಿಚಾರಣಾಧಿಕಾರಿಯು ಯಾವುದೇ ಸಾಕ್ಷಿಗಳನ್ನು ವಿಚಾರಣೆ ಮಾಡದೇ, ದಾಖಲಾತಿಗಳನ್ನು ಗುರುತಿಸದೇ ಏಕಪಕ್ಷೀಯವಾಗಿ ತೀರ್ಮಾನಕ್ಕೆ ಬಂದಿರುತ್ತಾರೆ ಎಂದು ಉತ್ತರ ನೀಡಿ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಮೇಲೆ (9)ರಲ್ಲಿ ಓದಲಾದ ಶ್ರೀ ವಿ. ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ 6404/2011ನ್ನು ದಾಖಲಿಸಿ ಸರ್ಕಾರವು ಜಾರಿ ಮಾಡಲಾಗಿದ್ದ ದಿನಾಂಕ: 18-08-2011ರ 2ನೇ ಕಾರಣ ಕೇಳುವ ನೋಟೀಸ್ ಪ್ರಶ್ನಿಸಿ ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (23)ಕ್ಕೆ ಅನುಗುಣವಾಗಿರುವುದಿಲ್ಲ. ವಿಚಾರಣಾಧಿಕಾರಿಯು ಯಾವುದೇ ಸಾಕ್ಷಿಗಳನ್ನು ವಿಚಾರಣೆ ಮಾಡದೇ, ದಾಖಲಾತಿಗಳನ್ನು ಗುರುತಿಸದೇ ಏಕಪಕ್ಷೀಯವಾಗಿ ತೀರ್ಮಾನಕ್ಕೆ ಬಂದಿರುತ್ತಾರೆ ಎಂದು ಮಾನ್ಯ ನ್ಯಾಯ ಮಂಡಳಿಯಲ್ಲಿ ಪ್ರಶ್ನಿಸಿರುತ್ತಾರೆ. ಮಾನ್ಯ ನ್ಯಾಯ ಮಂಡಳಿಯು ದಿನಾಂಕ: 31-10-2011ರಂದು 2ನೇ ಕಾರಣ ಕೇಳುವ ನೋಟೀಸ್ ಮೇಲೆ ಮುಂದಿನ ಪ್ರಕ್ರಿಯೆಗೆ ತಡೆಯಾಜ್ಞೆ ನೀಡಿ ಮಧ್ಯಂತರ ಆದೇಶ ನೀಡಿತ್ತು.

ಅನಂತರ ಸರ್ಕಾರವು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಸಲ್ಲಿಸಿರುವ ಹೇಳಿಕೆಯಲ್ಲಿ ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಪ್ರಸೆಂಟಿಂಗ್ ಆಫೀಸರ್‌ರವರು ಯಾವುದೇ ಸಾಕ್ಷಿಗಳನ್ನು ಪರೀಕ್ಷೆಗೆ ಒಳಪಡಿಸಿರುವುದಿಲ್ಲವೆಂಬ ಹಾಗೂ ಯಾವುದೇ ದಾಖಲಾತಿಗಳನ್ನು

ಗುರುತಿಸಿರುವುದಿಲ್ಲವೆಂಬ ಅಂಶವನ್ನು ಗಮನಿಸಿ, ಆ ಕಾರಣದಿಂದ ವಿಷಯವನ್ನು ವಿಚಾರಣಾಧಿಕಾರಿಗಳಿಗೆ ಪುನಃ ಕಳುಹಿಸಿ ಯಾವ ಹಂತದಲ್ಲಿ ಅಸಾಂಗತ್ಯ (Discriepency) ಸಂಭವಿಸಿದೆಯೋ ಆ ಹಂತದಲ್ಲಿ ಕೆಸಿಎಸ್ (ಸಿಸಿಎ) ನಿಯಮಗಳು ನಿಯಮ 11(ಎ) 1ರ ಪ್ರಕಾರ ವಿಚಾರಣಾಧಿಕಾರಿಗಳಿಗೆ ಹಿಂದಿರುಗಿಸುವುದಾಗಿ ತಿಳಿಸಲಾಗಿತ್ತು. ಆದರೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ 2ನೇ ಕಾರಣ ಕೇಳುವ ನೋಟೀಸಿಗೆ ತಡೆಯಾಜ್ಞೆ ಇದ್ದ ಕಾರಣ ಮುಂದಿನ ಪ್ರಕ್ರಿಯೆ ಕೈಗೊಳ್ಳಲು ಸಾಧ್ಯವಾಗಿರಲಿಲ್ಲ. ಈ ಮಧ್ಯೆ ಶ್ರೀ ವಿ. ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರು 2ನೇ ಕಾರಣ ಕೇಳುವ ನೋಟೀಸ್ ಪ್ರಶ್ನಿಸಿ ಮಾನ್ಯ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿಯನ್ನು ಹಿಂಪಡೆದಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಯವರು ಯಾವುದೇ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸದೇ ಹಾಗೂ ದಾಖಲಾತಿಗಳನ್ನು ಗುರುತಿಸದೇ ಸಲ್ಲಿಸಿರುವ ವರದಿಯು ಸಮರ್ಪಕವಾಗಿಲ್ಲದ ಕಾರಣ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸುವ ಹಾಗೂ ದಾಖಲಾತಿಗಳನ್ನು ಗುರುತಿಸಿ ವಿಚಾರಣೆ ನಡೆಸುವ ಹಂತದಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಮುಂದುವರೆದ ವಿಚಾರಣೆ ನಡೆಸಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 98 ಯುಇಸೇ 2005, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ, 2013**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(ಎ) 1ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ. ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ರವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಮುಂದುವರೆದ ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎಂ.ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಜಿತೇಂದ್ರಶೆಟ್ಟಿ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಈ ವಿಚಾರಣೆಗಾಗಿ ಶ್ರೀ ಎಂ.ಜಿ. ಹಿರೇಮಠ್, ಇವರಿಗೆ ಸಂಭಾವನೆಯನ್ನು ಈಗಾಗಲೇ ಪಾವತಿಸಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24–04–98ರನ್ವಯ ಈ ಪ್ರಕರಣದಲ್ಲಿ ಈಗಾಗಲೇ ವಿಚಾರಣಾಧಿಕಾರಿಗಳಿಗೆ ಸಂಭಾವನೆ ನೀಡಿರುವುದರಿಂದ ಅದೇ ಆರೋಪಗಳ ವಿಚಾರಣೆಗಾಗಿ ಮುಂದುವರೆದ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಗೆ ಪ್ರಕರಣವನ್ನು ಹಿಂದಿರುಗಿಸುತ್ತಿರುವುದರಿಂದ ವಿಚಾರಣಾಧಿಕಾರಿಗೆ ಪ್ರತ್ಯೇಕವಾಗಿ ಸಂಭಾವನೆ ನೀಡುವ ಅವಶ್ಯಕತೆ ಇರುವುದಿಲ್ಲ.

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಶೀಘ್ರಲಿಪಿಗಾರರ ಸೇವೆ ಸಾಮಾಗ್ರಿ ಇತ್ಯಾದಿಗಳನ್ನು ಒದಗಿಸಲು ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರಿಗೆ ಸೂಚಿಸಲಾಗಿದೆ. ವಿಚಾರಣೆಯನ್ನು ಆರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎ. ಹಿದಾಯತ್ತುಲ್ಲ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

P.R. 606

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ ಆದೇಶ

**ವಿಷಯ :** ರಾಜ್ಯದಲ್ಲಿ ಜೀತದಾಳುಗಳನ್ನು ಗುರುತಿಸುವ ಸಲುವಾಗಿ ಸಮೀಕ್ಷೆ ಕಾರ್ಯ ಕೈಗೊಳ್ಳಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 05 ಆರ್‌ಬಿಎಲ್ 2012, ದಿನಾಂಕ : 13–6–2012.
2. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪತ್ರ ಸಂ: ಎಂಎಜಿ (4)ಜೀತದಾಳು/ಸಿಆರ್/7/2012–13, ದಿನಾಂಕ : 06–02–2013.

ಮೇಲ್ಕಂಡ ಉಲ್ಲೇಖ (1)ರ ಆದೇಶದಲ್ಲಿ ರಾಜ್ಯದಲ್ಲಿ ಜೀತದಾಳುಗಳನ್ನು ಗುರುತಿಸುವ ಸಲುವಾಗಿ ಸಮೀಕ್ಷೆ ಕಾರ್ಯ ಕೈಗೊಳ್ಳಲು ಪ್ರತಿ ಜಿಲ್ಲೆಗೆ ರೂ. 2.00 ಲಕ್ಷಗಳಂತೆ ರಾಜ್ಯದ 30 ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳ ಡಿ.ಡಿ.ಓ ಕೋಡನ್ನು ನಮೂದಿಸಿ ಒಟ್ಟು ರೂ. 60.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ ಉಲ್ಲೇಖ (2)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ಇವರು ತಮ್ಮ ಜಿಲ್ಲೆಯ ಡ್ರಾಯಿಂಗ್ ಕೋಡ್ ನಂಬರ್ 01–00–RD–0004 ಅಲ್ಲದ ಕಾರಣ ಇದನ್ನು 0200 RD–0002 ಎಂದು ಸರಿಪಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಆದ್ದರಿಂದ ಉಲ್ಲೇಖ (1)ರ ಆದೇಶದ ಕೋಷ್ಟಕದಲ್ಲಿ ನಮೂದಿಸಿದ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳ DDO Code No. 01-00-RD-0004 ಎಂಬುದರ ಬದಲಾಗಿ 0200RD-0002 ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ದೀಪಾ**
ನಿರ್ದೇಶಕರು, ಸ್ವ.ಉ.ಕಾ. ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

P.R. 596

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕೊಪ್ಪಳ ನಗರದ ಮಧ್ಯಭಾಗದಲ್ಲಿ ಹಾದುಹೋಗುವ ರಾಷ್ಟ್ರೀಯ ಹೆದ್ದಾರಿ 63ರ ಉಳಿದ ಭಾಗಗಳನ್ನು ಮತ್ತು 5 ವೃತ್ತಗಳನ್ನು ಅಂದಾಜು ಮೊತ್ತ ರೂ. 17.38 ಕೋಟಿಗಳಲ್ಲಿ ನಿರ್ಮಾಣ ಮಾಡುವ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರ ಪತ್ರ ಸಂಖ್ಯೆ : ಮುಇಂ(ಉ) : ತಾಸ–6 : ಸಇಂ–3: ಕೊವಿ : 2012–13 : 10096, ದಿನಾಂಕ ; 17–1–2013.

ಕೊಪ್ಪಳ ಮತಕ್ಷೇತ್ರದ ಮಾನ್ಯ ಶಾಸಕರು, ಮಾನ್ಯ ಮುಖ್ಯಮಂತ್ರಿಯವರಿಗೆ ಬರೆದ ಪತ್ರದಲ್ಲಿ, ಗುಲ್ಬರ್ಗಾ ಸಚಿವ ಸಂಪುಟದಲ್ಲಿ ತೀರ್ಮಾನಿಸಲಾಗಿದ್ದ ನಗರೋತ್ಥಾನ ಯೋಜನೆಯಡಿ ಮತ್ತು ಮುಖ್ಯಮಂತ್ರಿಗಳ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಅಭಿವೃದ್ಧಿ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆಯಾಗಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, ಇದರ ಜೊತೆಗೆ ಬಸವೇಶ್ವರ ವೃತ್ತ (ಗಂಜ್ ಸರ್ಕಲ್), ಅಶೋಕ ವೃತ್ತ, ಹಳೇ ಡಿಸಿ ಆಫೀಸ್ ವೃತ್ತ, ಸ್ಟೇಷನ್ ರೋಡು ವೃತ್ತ, ಇವುಗಳ ರಸ್ತೆಯು ಅತ್ಯಂತ ವಾಹನ ದಟ್ಟಣೆಯಿಂದ ಸಂಚಾರಕ್ಕೆ ತೊಂದರೆಯಾಗಿರುವುದರಿಂದ ಈ ರಸ್ತೆಯನ್ನು ಅಭಿವೃದ್ಧಿ ಪಡಿಸಲು ಹಾಗೂ ಕೊಪ್ಪಳ ನಗರದ ಮಧ್ಯಭಾಗದಲ್ಲಿ ಬರುವ ರಸ್ತೆಯಲ್ಲಿನ ವೃತ್ತಗಳನ್ನು ನಿರ್ಮಾಣ ಮಾಡಲು ಹೆಚ್ಚುವರಿಯಾಗಿ ರೂ. 17.38 ಕೋಟಿ ಅನುದಾನದೊಂದಿಗೆ ವಿಶೇಷ ಯೋಜನೆಯಡಿ ಕಾಮಗಾರಿ ಕೈಗೆತ್ತಿಕೊಳ್ಳಲು ಕೋರಿರುತ್ತಾರೆ. ಸದರಿ ಪತ್ರದ ಮೇಲೆ ಮಾನ್ಯ ಮುಖ್ಯಮಂತ್ರಿಯವರು "ರೂ. 17.38 ಕೋಟಿ ಅನುದಾನ ಬಿಡುಗಡೆ ಮಾಡುವುದು ಸಚಿವ ಸಂಪುಟಕ್ಕೆ ವಿಷಯ ಮಂಡಿಸಿ" ಎಂದು ಆದೇಶಿಸಿರುತ್ತಾರೆ.

2. ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡರವರು, ಕೊಪ್ಪಳ ನಗರದ ಮಧ್ಯ ಭಾಗದಲ್ಲಿ ಹಾಯ್ದುಹೋಗುವ ರಸ್ತೆಯು ರಾಷ್ಟ್ರೀಯ ಹೆದ್ದಾರಿ–63 ಆಗಿದ್ದು, ಸದರಿ ರಸ್ತೆಯ ಅಭಿವೃದ್ಧಿ ಹಾಗೂ ಡಾಂಬರೀಕರಣ, ಸಿಸಿ ಚರಂಡಿ ಮತ್ತು ಫುಟ್‌ಪಾತ್‌ಗಳ ನಿರ್ಮಾಣವನ್ನು ನಿರ್ಮಿತಿ ಕೇಂದ್ರ ಕೊಪ್ಪಳ ಇವರು ನಿರ್ವಹಿಸುತ್ತಿದ್ದು, ಕೆಲವೊಂದು ಭಾಗಗಳಲ್ಲಿ ಬಿಟ್ಟುಹೋಗಿದ್ದು, ಅದರಲ್ಲಿ ಎಸ್.ಎಫ್.ಎಸ್. ಶಾಲೆಯಿಂದ ಗಂಜ್ ಸರ್ಕಲ್‌ವರೆಗೆ ಎರಡೂ ಬದಿಗಳಲ್ಲಿ ಹಾಗೂ ವೈ–ಜಂಕ್ಷನ್‌ದಿಂದ ಅಮೀನಪೂರ (ಬನ್ನಿಕಟ್ಟಿ) ರವರೆಗೆ ಬರುವ 5 ವೃತ್ತಗಳು (ಬಸವೇಶ್ವರ ವೃತ್ತ, ಭೀಮರಾಯ ವೃತ್ತ, ಕನಕದಾಸ ವೃತ್ತ ಅಶೋಕ ವೃತ್ತ ಹಾಗೂ ಶಾಸ್ತ್ರಿ ವೃತ್ತ) ನಿರ್ಮಾಣ ಮಾಡಲು ಅವಕಾಶ ಕಲ್ಪಿಸಿ, 2012–13ನೇ ಸಾಲಿನ ದರಪಟ್ಟಿಯ ದರಗಳನ್ವಯ ರೂ. 1738.00 ಲಕ್ಷಗಳ ರೇಖಾ ಅಂದಾಜು ಪತ್ರಿಕೆ ತಯಾರಿಸಿ, ಸದರಿ ಕಾಮಗಾರಿಗೆ ಸಚಿವ ಸಂಪುಟದ ಮುಂದೆ ಮಂಡಿಸಿ ಆಡಳಿತಾತ್ಮಕ ಅನುಮೋದನೆಯೊಂದಿಗೆ ಸೂಕ್ತ ಅನುದಾನ ಒದಗಿಸಲು ಕೋರಿರುತ್ತಾರೆ.

3. ಲೋಕೋಪಯೋಗಿ ಇಲಾಖೆಗೆ 2012–13ನೇ ಸಾಲಿಗೆ ಒದಗಿಸಲಾಗಿರುವ ಅನುದಾನವನ್ನು ಹಾಲಿ ಮುಂದುವರೆದ ಯೋಜನೆಗಳ ಕಾಮಗಾರಿಗಳಿಗೆ ಹಂಚಿಕೆ ಮಾಡಿ, ಅಪೆಂಡಿಕ್ಸ್–ಇ ನಲ್ಲಿ ಅನುಮೋದನೆಗಾಗಿ ಸಲ್ಲಿಸಲಾಗಿರುವುದರಿಂದ, ಪ್ರಸ್ತಾಪಿತ ಕಾಮಗಾರಿಗೆ ಹೆಚ್ಚಿನ ಅನುದಾನಕ್ಕಾಗಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಲಾಗಿತ್ತು. ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ : PWD 44 FC-1/13, ದಿನಾಂಕ : 19–1–2013 ರಲ್ಲಿ ಈ ಕೆಳಕಂಡಂತೆ ಅಭಿಪ್ರಾಯ ನೀಡಿದೆ :

"The proposal has been examined. Finance Department agrees to the project provided that PWD includes this in Appendix-E depending upon the availability of Budget".

4. 2012–13ನೇ ಸಾಲಿನಲ್ಲಿ ಹೊಸ ಕಾಮಗಾರಿಗಳಿಗಾಗಿ ಒದಗಿಸಲಾದ ಅನುದಾನದಲ್ಲಿ ಈಗಾಗಲೇ ಹೊಸ ಕಾಮಗಾರಿಗಳ ಪಟ್ಟಿ ತಯಾರಿಸಲಾಗಿರುವುದರಿಂದ, ಈ ಕಾಮಗಾರಿಯನ್ನು ಸಹ 2012–13ನೇ ಸಾಲಿನಲ್ಲಿ ಕೈಗೆತ್ತಿಕೊಳ್ಳಬೇಕಾದಲ್ಲಿ, ಅಂದಾಜು ಮೊತ್ತ ರೂ. 17.38 ಕೋಟಿಗಳ ಶೇಕಡ 33 ರಷ್ಟು ಅಂದರೆ ರೂ. 5.79 ಕೋಟಿಗಳ ಹೆಚ್ಚುವರಿ ಅನುದಾನ ಅವಶ್ಯಕತೆ ಇರುತ್ತದೆ. ಆದ್ದರಿಂದ ಮಾನ್ಯ ಶಾಸಕರ ಪತ್ರದ ಮೇಲೆ ಮಾನ್ಯ ಮುಖ್ಯಮಂತ್ರಿಯವರು ನೀಡಿರುವ ಸೂಚನೆಯಂತೆ ಈ ಪ್ರಸ್ತಾವನೆಯನ್ನು ಹೆಚ್ಚುವರಿ ಅನುದಾನದ ಸಲುವಾಗಿ ಕರ್ನಾಟಕ ಸರ್ಕಾರದ (ವ್ಯವಹಾರಗಳು ನಿರ್ವಹಣೆ) ನಿಯಮಗಳು 1977ರ ನಿಯಮದ ನಿಯಮ 17 ಹಾಗೂ ಮೊದಲನೇ ಷೆಡ್ಯೂಲ್‌ನ ಐಟಂ 15 ರನ್ವಯ ಸಚಿವ ಸಂಪುಟದ ಮುಂದೆ ಮಂಡಿಸಲು ತೀರ್ಮಾನಿಸಿ ಅದರಂತೆ ಕಡತವನ್ನು ಸಚಿವ ಸಂಪುಟದ ಅನುಮೋದನೆ ಮಂಡಿಸಲಾಯಿತು.

5. ಸರ್ಕಾರದ ಮುಖ್ಯ ಕಾರ್ಯದರ್ಶಿಯವರು, ಪ್ರಸ್ತಾವನೆಯನ್ನು ಕೊಪ್ಪಳ ನಗರದ ಮಧ್ಯಭಾಗದಲ್ಲಿ ಹಾದುಹೋಗುವ ರಾಷ್ಟ್ರೀಯ ಹೆದ್ದಾರಿ–63ರ ಉಳಿದ ಭಾಗಗಳನ್ನು ಮತ್ತು 5 ವೃತ್ತಗಳನ್ನು ಅಂದಾಜು ಮೊತ್ತ ರೂ. 17.38 ಕೋಟಿಗಳಲ್ಲಿ ನಿರ್ಮಾಣ ಮಾಡುವ ಕಾಮಗಾರಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ಕೋರಿರುವುದಾಗಿದ್ದು, ಸದರಿ ಕಾಮಗಾರಿಯನ್ನು ಜರೂರಾಗಿ ತೆಗೆದುಕೊಳ್ಳಬೇಕಾಗಿರುವುದರಿಂದ ಈ ಬಗ್ಗೆ ಆದೇಶ ಹೊರಡಿಸಿ ನಂತರ ಸಚಿವ ಸಂಪುಟದ ಘಟನೋತ್ತರ ಅನುಮೋದನೆ ಪಡೆಯಬಹುದೆಂದು ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆ ಪಡೆದು ಸೂಚಿಸಿರುತ್ತಾರೆ.

6. ಅದರಂತೆ, ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ :

### ಸರ್ಕಾರದ ಆದೇಶ ಸಂಖ್ಯೆ : ಲೋಇ 27 ಸಿಆರ್‌ಎಂ 2013, ಬೆಂಗಳೂರು, ದಿನಾಂಕ : 31–1–2013

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ನಿಯಮ 17 ಮತ್ತು ಮೊದಲನೇ ಷೆಡ್ಯೂಲ್‌ನ ಐಟಂ 15 ರನ್ವಯ, ಸಚಿವ ಸಂಪುಟದ ಘಟನ ಅನುಮೋದನೆ ಪಡೆಯುವ ಷರತ್ತಿಗೊಳಪಟ್ಟು, ಕೊಪ್ಪಳ ನಗರದ ಮಧ್ಯ ಭಾಗದಲ್ಲಿ ಹಾಯ್ದುಹೋಗುವ ರಸ್ತೆಯು ರಾಷ್ಟ್ರೀಯ ಹೆದ್ದಾರಿ–63 ರಲ್ಲಿ ಬಿಟ್ಟುಹೋಗಿರುವ ಭಾಗಗಳನ್ನು ಅಭಿವೃದ್ಧಿ ಪಡಿಸಲು ಹಾಗೂ 5 ವೃತ್ತಗಳನ್ನು (ಬಸವೇಶ್ವರ ವೃತ್ತ, ಭೀಮರಾಯ ವೃತ್ತ, ಕನಕದಾಸ ವೃತ್ತ ಅಶೋಕ ವೃತ್ತ ಹಾಗೂ ಶಾಸ್ತ್ರಿ ವೃತ್ತ) ರೂ. 1738.00 ಲಕ್ಷಗಳ (ಒಂದು ಸಾವಿರದ ಏಳುನೂರ ಮೂವತ್ತೆಂಟು ಲಕ್ಷಗಳು) ಅಂದಾಜು ವೆಚ್ಚದಲ್ಲಿ ಅಂದಾಜು ಮೊತ್ತದ ಮೂರನೇ ಒಂದು ಭಾಗವಾದ ರೂ. 579 ಲಕ್ಷಗಳ (ಐದುನೂರ ಎಪ್ಪತ್ತೊಂಭತ್ತು ಲಕ್ಷಗಳು) ಅನುದಾನವನ್ನು ಒದಗಿಸುವುದರೊಂದಿಗೆ 2012–13ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ ಸೇರ್ಪಡಿಸಿ ನಿರ್ಮಾಣ ಮಾಡುವ ಕಾಮಗಾರಿಯನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

2. ಮೇಲಿನ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳತಕ್ಕದ್ದು ಮತ್ತು ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೃಷ್ಣಮೂರ್ತಿ ಬಿ. ಕುಲಕರ್ಣಿ**
ಸರ್ಕಾರದ ಉಪ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ ಮತ್ತು ಕಟ್ಟಡಗಳು).

P.R. 597

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯ ಮನಹಳ್ಳಿಯಿಂದ ನಾಯನೇಗಲಿ, ಮಂಕಣಿ, ಡೋಮನಾಳ, ಕಟಗೂರ ಮೂಲಕ ಕೂಡಲ ಸಂಗಮದವರೆಗಿನ 0.00 ರಿಂದ 23.44 ಕಿ.ಮೀ. ರವರೆಗಿನ ಜಿಲ್ಲಾ ಮುಖ್ಯ ರಸ್ತೆಯನ್ನು ರೂ. 20.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಅಭಿವೃದ್ಧಿ ಪಡಿಸುವ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಮುಇಂ:ರಾಹೆ : ಟಿಎ–2:ಎಇ–3:ಸಿಆರ್‌ಎಫ್:2012–13:6516–19, ದಿನಾಂಕ : 29–8–2012.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರ ಪತ್ರ ಸಂಖ್ಯೆ : ಮುಇಂ (ಉ) : ತಾಂಸ–2 : ಸಇಂ–1: ಇತರೆ : 2012–13 : 05494, ದಿನಾಂಕ ; 10–10–2012 ಮತ್ತು ಸಂ. ಮುಇಂಉ:ತಾಸ–2: ಸಇಂ–1: 2012–13: 09433, ದಿನಾಂಕ : 1–1–2013.

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ : 29–8–2012ರ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರುರವರು ಬಾಗಲಕೋಟೆ ಜಿಲ್ಲೆಯ ಮನಹಳ್ಳಿಯಿಂದ ನಾಯನೇಗಲಿ ಮಾರ್ಗವಾಗಿ ಕೂಡಲಸಂಗಮದವರೆಗಿನ ಕಿಮೀ 0.00 ರಿಂದ ಕಿ.ಮೀ. 23.44 ರವರೆಗಿನ ಜಿಲ್ಲಾ ಮುಖ್ಯ ರಸ್ತೆಯನ್ನು ಅಭಿವೃದ್ಧಿಪಡಿಸಲು ಬಾಗಲಕೋಟೆ ಮತಕ್ಷೇತ್ರದ ಮಾನ್ಯ ಶಾಸಕರಾದ ಶ್ರೀ ವೀರಣ್ಣ ಚರಂತಿಮಠ, ರವರು ಕೋರಿದ್ದು, 2012–13ನೇ ಸಾಲಿನ ಕೇಂದ್ರ ರಸ್ತೆ ನಿಧಿ ಯೋಜನೆ (ಸಿಆರ್‌ಎಫ್) ಅಡಿಯಲ್ಲಿನ ಪ್ರಸ್ತಾವನೆಗಳ ಆದ್ಯತಾ ಪಟ್ಟಿಯನ್ನು ದಿನಾಂಕ : 18–7–2012 ರಲ್ಲಿ ಕೇಂದ್ರ ಭೂ ಸಾರಿಗೆ ಮಂತ್ರಾಲಯಕ್ಕೆ ಸಲ್ಲಿಸಲಾಗಿರುವುದರಿಂದ, ಸದರಿ ರಸ್ತೆಯನ್ನು ಲೋಕೋಪಯೋಗಿ ಇಲಾಖೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ಅಭಿವೃದ್ಧಿ ಪಡಿಸುವುದು ಸೂಕ್ತವೆಂದು ಅಭಿಪ್ರಾಯ ಪಡುತ್ತಾ, ರೇಖಾ ಅಂದಾಜು ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

2. ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ : 10–10–2012ರ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡರವರು, ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಧಾರ್ಮಿಕ ಐತಿಹಾಸಿಕ ಸ್ಥಳವಾದ ಕೂಡಲಸಂಗಮ ಸುಕ್ಷೇತ್ರಕ್ಕೆ ಸೇರುವ ರಸ್ತೆಯಾದ ರಾಷ್ಟ್ರೀಯ ಹೆದ್ದಾರಿ–13ರ ಮನಹಳ್ಳಿಯಿಂದ ಕೂಡಲಸಂಗಮ ರಸ್ತೆಯ 23.44 ಕಿಮೀ ಉದ್ದವಿದ್ದು, ಬಾಗಲಕೋಟೆ ತಾಲ್ಲೂಕಿನಲ್ಲಿ 16.74 ಕಿಮೀ ಮತ್ತು ಹುನಗುಂದ ತಾಲ್ಲೂಕಿನಲ್ಲಿ 6.70 ಕಿಮೀಗಳಷ್ಟು ಇರುತ್ತದೆ. ಹಾಗೂ ಸದರಿ ರಸ್ತೆಯು ಪ್ರವಾಸಿಗರಿಗೆ ಆಲಮಟ್ಟಿಯಿಂದ ಕೂಡಲಸಂಗಮಕ್ಕೆ ಅತೀ ಸಮೀಪದ ಸಂಪರ್ಕ ಕಲ್ಪಿಸುವ ರಸ್ತೆಯಾಗಿದ್ದು, ಪ್ರತಿ ದಿನ ದೇಶ ಹಾಗೂ ವಿದೇಶಗಳಿಂದ ಸಾವಿರಾರು ಪ್ರವಾಸಿಗರು ಭೇಟಿ ನೀಡುವುದರಿಂದ ರಸ್ತೆ ಅಭಿವೃದ್ಧಿ ಅವಶ್ಯಕತೆ ಇರುತ್ತದೆ ಎಂದು ತಿಳಿಸಿರುತ್ತಾರೆ. ಇದಲ್ಲದೆ, ಬಾಗಲಕೋಟೆ ಮತಕ್ಷೇತ್ರದ ಶಾಸಕರಾದ ಶ್ರೀ ವೀರಣ್ಣ ಸಿ ಚರಂತಿಮಠ ಹಾಗೂ ಹುನಗುಂದ ಮತಕ್ಷೇತ್ರದ ಶಾಸಕರಾದ ಶ್ರೀ ದೊಡ್ಡನಗೌಡ ಜಿ. ಪಾಟೀಲ, ರವರುಗಳು ಸಹ ಶಿಫಾರಸ್ಸು ಮಾಡಿರುವುದರಿಂದ, ಸದರಿ ರಸ್ತೆಯ ವಿವರವಾದ ಅಂದಾಜು ಪಟ್ಟಿಯನ್ನು 2012–13ನೇ ಸಾಲಿನ ದರಪಟ್ಟಿಯನ್ನು ಅಳವಡಿಸಿ ರೂ. 2000.00 ಲಕ್ಷಗಳಿಗೆ ತಯಾರಿಸಿ, ಸರ್ಕಾರದ ಆಡಳಿತಾತ್ಮಕ ಅನುಮೋದನೆ ಹಾಗೂ ಸೂಕ್ತ ಅನುದಾನ ಬಿಡುಗಡೆಗಾಗಿ ಸಲ್ಲಿಸಿರುತ್ತಾರೆ.

3. ಲೋಕೋಪಯೋಗಿ ಇಲಾಖೆಗೆ 2012–13ನೇ ಸಾಲಿಗೆ ಒದಗಿಸಲಾಗಿರುವ ಅನುದಾನವನ್ನು ಹಾಲಿ ಮುಂದುವರೆದ ಯೋಜನೆಗಳ ಕಾಮಗಾರಿಗಳಿಗೆ ಹಂಚಿಕೆ ಮಾಡಿ, ಅಪೆಂಡಿಕ್ಸ್–ಇ ನಲ್ಲಿ ಅನುಮೋದನೆಗಾಗಿ ಸಲ್ಲಿಸಲಾಗಿರುವುದರಿಂದ, ಪ್ರಸ್ತಾಪಿತ ಕಾಮಗಾರಿಗೆ ಹೆಚ್ಚಿನ ಅನುದಾನಕ್ಕಾಗಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಲಾಗಿತ್ತು. ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ : PWD 651 FC-1/12, ದಿನಾಂಕ : 31–10–2012 ರಲ್ಲಿ ಈ ಕೆಳಕಂಡಂತೆ ಅಭಿಪ್ರಾಯ ನೀಡಿದೆ :

"The proposal has been examined and informs that :

a) It is difficult for Finance Department to commit additional grants for individual works. It is for the Administrative Department to prioritize.

b) Finance Department advises Administrative Department to take a decision to include this work in Appendix-E for the year 2012-13.

4. ಆರ್ಥಿಕ ಇಲಾಖೆಯ ಅಭಿಪ್ರಾಯದ ಮೇರೆಗೆ, ಈ ಕಾಮಗಾರಿಯನ್ನು 2012–13ನೇ ಸಾಲಿನ ಹೊಸ ಕಾಮಗಾರಿಗಳ ಅಪೆಂಡಿಕ್ಸ್–ಇ ನಲ್ಲಿ ಸೇರ್ಪಡೆಗೊಳಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರಿಗೆ ತಿಳಿಸಲಾಗಿತ್ತು. ಆದರೆ, ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ : 1–1–2013ರ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡರವರು, ಉತ್ತರ ವಲಯಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್–ಇ ನಲ್ಲಿ ಸೇರ್ಪಡೆಗೊಳಿಸುವ ಹೊಸ ಕಾಮಗಾರಿಗಳ ಪಟ್ಟಿಯನ್ನು ಈಗಾಗಲೇ ಅನುಮೋದನೆಗೆ ಸಲ್ಲಿಸಲಾಗಿರುವುದರಿಂದ, ಪ್ರಸ್ತುತ ಕಾಮಗಾರಿಯನ್ನು ಸದರಿ ಪಟ್ಟಿಯಲ್ಲಿ ಹೆಚ್ಚುವರಿ ಕಾಮಗಾರಿಯಾಗಿ ಸೇರ್ಪಡೆಗೊಳಿಸಲು ಹೆಚ್ಚುವರಿ ಅನುದಾನ ಒದಗಿಸಲು ಕೋರಿರುತ್ತಾರೆ.

5. ಅದರಂತೆ, ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ನಿಯಮ 17 ಹಾಗೂ ಸದರಿ ನಿಯಮಗಳ ಮೊದಲನೇ ಷೆಡ್ಯೂಲ್‌ನ ಐಟಂ 15ರನ್ವಯ, ಸಚಿವ ಸಂಪುಟದ ಅನುಮೋದನೆ ಪಡೆದು, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ :

**ಸರ್ಕಾರದ ಆದೇಶ ಸಂಖ್ಯೆ : ಲೋಇ 328 ಸಿಆರ್‌ಎಂ 2012, ಬೆಂಗಳೂರು, ದಿನಾಂಕ : 30–1–2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಬಾಗಲಕೋಟೆ ಜಿಲ್ಲೆಯ ಮನಹಳ್ಳಿಯಿಂದ ನಾಯನೇಗಲಿ, ಮಂಕಣಿ, ಡೋಮನಾಳ, ಕಟಗೂರ ಮೂಲಕ ಕೂಡಲ ಸಂಗದವರೆಗಿನ 0.00 ರಿಂದ 23.44 ಕಿಮೀ ರವರೆಗಿನ ಜಿಲ್ಲಾ ಮುಖ್ಯ ರಸ್ತೆಯನ್ನು ರೂ. 20.00 (ಇಪ್ಪತ್ತು ಕೋಟಿ ಮಾತ್ರ) ಕೋಟಿಗಳ ಅಂದಾಜು ವೆಚ್ಚದಲ್ಲಿ ಅಭಿವೃದ್ಧಿ ಪಡಿಸುವ ಕಾಮಗಾರಿಗೆ ಅಂದಾಜು ಮೊತ್ತದ ಶೇಕಡ 33 ರಷ್ಟು ಅಂದರೆ ರೂ. 6.66 ಕೋಟಿಗಳ (ಆರು ಕೋಟಿ ಅರವತ್ತಾರು ಲಕ್ಷಗಳು ಮಾತ್ರ) ಹೆಚ್ಚುವರಿ ಅನುದಾನದೊಂದಿಗೆ 2012–13ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ ಸೇರಿಸುವ ಷರತ್ತಿಗೊಳಪಟ್ಟು ಕೈಗೆತ್ತಿಕೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

2. ಮೇಲಿನ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳತಕ್ಕದ್ದು ಮತ್ತು ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.

3. ಈ ಆದೇಶವು ಕನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977ರ 17ನೇ ನಿಯಮದ (2)ನೇ ಉಪ ನಿಯಮದ ಪರಂತುಕದ ವ್ಯಾಪ್ತಿಯೊಳಗೆ ಬರುತ್ತದೆ ಮತ್ತು ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೃಷ್ಣಮೂರ್ತಿ ಬಿ. ಕುಲಕರ್ಣಿ**
ಸರ್ಕಾರದ ಉಪ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ ಮತ್ತು ಕಟ್ಟಡಗಳು).

**P.R. 598**

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಜಿಲ್ಲಾ ಮುಖ್ಯರಸ್ತೆಗಳಾದ (1) ದೇವದುರ್ಗದಿಂದ ಕೋಣಚಪಳಿ–ಮಾದ್ಯರಗೋಳ ರಸ್ತೆ ಕಿಮೀ. 0.00 ರಿಂದ 27.40 ಕಿಮೀ ರವರೆಗೆ (2) ದೇವದುರ್ಗ ಕ್ರಾಸ್‌ನಿಂದ ಮಾತಪಳ್ಳಿ ವಯಾ ಸೂಗರಾಳ, ಗುಂಡಗುರ್ತಿ ಕಿಮೀ 0.00 ರಿಂದ 21.00 ರವರೆಗೆ ಮತ್ತು (3) ಅರಕೇರಾ ಕ್ರಾಸ್‌ನಿಂದ ನಾರಬಂಡದವರೆಗೆ ವಯಾ ಗಲಗ ಕಿಮೀ 0.00 ರಿಂದ 28.20 ರವರೆಗೆ, ಒಟ್ಟು ರೂ. 82.30 ಕೋಟಿಗಳ ಅಂದಾಜು ವೆಚ್ಚದಲ್ಲಿ ಅಭಿವೃದ್ಧಿಪಡಿಸುವ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**

1. ಮಾನ್ಯ ಮುಖ್ಯ ಮಂತ್ರಿಯವರ ರಾಜಕೀಯ ಕಾರ್ಯದರ್ಶಿಯವರು ಮಾನ್ಯ ಮುಖ್ಯಮಂತ್ರಿಯವರಿಗೆ ಬರೆದ ಪತ್ರ ಸಂ. ಮುಮರಾಕಾ:176:2012–13, ದಿನಾಂಕ : 1–12–2012.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರ ಪತ್ರ ಸಂಖ್ಯೆ : ಮುಇಂ (ಉ):ತಾಂಸ–3:ಸಇಂ–2:ರಾವಿ:2012–13: 08984, ದಿನಾಂಕ : 18–12–2012.

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ : 1–12–2012ರ ಪತ್ರದಲ್ಲಿ, ಮಾನ್ಯ ಮುಖ್ಯ ಮಂತ್ರಿಯವರ ರಾಜಕೀಯ ಕಾರ್ಯದರ್ಶಿಯವರು, ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ಹಿಂದುಳಿದ ಪ್ರದೇಶಗಳಲ್ಲಿ ಅತಿ ಹಿಂದುಳಿದ ಪ್ರದೇಶವಾಗಿದ್ದು, ಇಲ್ಲಿ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದ ಜನಾಂಗದವರು ಹಾಗೂ ಗುಡ್ಡಗಾಡು ವಾಸಿಗಳು ಅತಿ ಹೆಚ್ಚಾಗಿ ವಾಸಿಸುತ್ತಿರುತ್ತಾರೆಂದೂ, ಡಾ॥ ನಂಜುಂಡಪ್ಪ ವರದಿಯಲ್ಲಿ ಕೂಡ ಈ ತಾಲ್ಲೂಕನ್ನು ಅತಿ ಹಿಂದುಳಿದ ತಾಲ್ಲೂಕು ಎಂದು ಗುರುತಿಸಲ್ಪಟ್ಟಿದ್ದು. ಈ ತಾಲ್ಲೂಕಿನ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳನ್ನು ಅಭಿವೃದ್ಧಿ ಪಡಿಸುವುದರಿಂದ ಅಂತರ ಜಿಲ್ಲೆಗಳಾದ ಯಾದಗೀರ್, ಬಿಜಾಪುರ, ಗುಲ್ಬರ್ಗಾ, ಕೊಪ್ಪಳ, ಬಳ್ಳಾರಿ ಮತ್ತು ಆಂಧ್ರಪ್ರದೇಶಕ್ಕೆ ಸಂಪರ್ಕ ಕಲ್ಪಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ. ಆದ್ದರಿಂದ, ಈ ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ವಿಶೇಷ ಪ್ರಕರಣವೆಂದು ಪರಗಣಿಸಿ ಸಚಿವ ಸಂಪುಟದ ಮುಂದೆ ಮಂಡಿಸಲು ನಿರ್ದೇಶನ ಕೋರಿರುತ್ತಾರೆ. ಸದರಿ ಪತ್ರದ ಮೇಲೆ ಮಾನ್ಯ ಮುಖ್ಯ ಮಂತ್ರಿಯವರು **"ಸಚಿವ ಸಂಪುಟ ಸಭೆಗೆ ಮಂಡಿಸಿ"** ಎಂದು ಸೂಚಿಸಿರುತ್ತಾರೆ.

| | | | |
|---|---|---|---|
| 1. | ದೇವದುರ್ಗದಿಂದ ಕೋಣಚಪಳಿ–ಮ್ಯಾದರಗೋಳ | – | 30 ಕಿಮೀ |
| 2. | ದೇವದುರ್ಗ ಕ್ರಾಸ್‌ನಿಂದ ಮಾತಪಳ್ಳಿ ವಯಾ ಸೂಗರಾಳ, ಗುಂಡಗುತ್ತಿ | – | 24 ಕಿಮೀ |
| 3. | ಅರಕೇರಾ ಕ್ರಾಸ್‌ನಿಂದ ನಾರಬಂಡದವರೆಗೆ ವಯಾ ಗಲಗ | – | 30 ಕಿಮೀ |

2. ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ : 18–12–2012ರ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡರವರು, ಮಾನ್ಯ ಮುಖ್ಯ ಮಂತ್ರಿಯವರ ರಾಜಕೀಯ ಕಾರ್ಯದರ್ಶಿಯವರ ಕೋರಿಕೆ ಮೇರೆಗೆ, ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳನ್ನು, 100 ಎಂಎಂಜಿಎಸ್‌ಬಿ ಹಾಗೂ 9.00 ಮೀ ಫಾರ್ಮೇಶನ್ ಅಗಲ ಮತ್ತು ಕ್ಯಾರೇಜ್ ವೇ ಅಗಲ 5.50 ಮೀ.ಗಳಿಗೆ ಅವಕಾಶ ಕಲ್ಪಿಸಿ, ಸಬ್ ಗ್ರೇಡ್ 300 ಎಂಎಂ, 5.50 ಮೀ ಕ್ಯಾರೇಜ್ ವೇ ಅಗಲಕ್ಕೆ 225 ಎಂಎಂ ಡಬ್ಲ್ಯುಬಿಎಂ 50 ಎಂಎಂಬಿಎಂದೊಂದಿಗೆ 25 ಎಂಎಂ ಎಸ್‌ಡಿಬಿಸಿ, ಸೇತುವೆ ನಿರ್ಮಾಣ, ಸಿಡಿ, ಮರುನಿರ್ಮಾಣ ಹಾಗೂ ಅಗಲೀಕರಣ, ಸಿ.ಸಿ. ಡ್ರೇನ್‌ಗಳಿಗಾಗಿ ಹಾಗೂ ಇತರ ಕೆಲಸಗಳಾದ ಯುಟಿಲಿಟಿ ಸ್ಥಳಾಂತರ, ವಿದ್ಯುತ್ ಕಂಬಗಳ ಸ್ಥಳಾಂತರ ಇತ್ಯಾದಿ ಕೆಲಸಗಳಿಗಾಗಿ ಸೂಕ್ತ ಇಡುಗಂಟು ಮೊತ್ತವನ್ನು ಅವಕಾಶ ಕಲ್ಪಿಸಿ, ಅಂದಾಜು ಪಟ್ಟಿ ತಯಾರು ಮಾಡಿ ಸರ್ಕಾರದ ಆಡಳಿತಾತ್ಮಕ ಅನುಮೋದನೆಗೆ ಸಲ್ಲಿಸಿರುತ್ತಾರೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಕೋಟಿ ರೂ.ಗಳಲ್ಲಿ) |
|---|---|---|
| 1. | ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ದೇವದುರ್ಗದಿಂದ ಕೋಣಚಪಳಿ–ಮಾದ್ಯರಗೋಳ ಜಿಲ್ಲಾ ಮುಖ್ಯ ರಸ್ತೆ 0.00 ಕಿಮೀ ರಿಂದ 27.40 ಕಿಮೀ ರವರೆಗೆ ಅಭಿವೃದ್ಧಿ | 29.30 |

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಕೋಟಿ ರೂ.ಗಳಲ್ಲಿ) |
|---|---|---|
| 2. | ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ದೇವದುರ್ಗ ಕ್ರಾಸ್‌ನಿಂದ ಮಾತಪಳ್ಳಿ ವಯಾ ಸೂಗರಾಳ, ಗುಂಡಗುತ್ತಿ ಜಿಲ್ಲಾ ಮುಖ್ಯ ರಸ್ತೆ ಕಿಮೀ 0.00 ರಿಂದ 21.00 ಕಿಮೀರವರೆಗೆ ಅಭಿವೃದ್ಧಿ | 23.50 |
| 3. | ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ, ಅರೆಕೇರಾ ಕ್ರಾಸ್‌ನಿಂದ ವಯಾ ಗಲಗ ನಾರಬಂಡದವರೆಗೆ 0.00 ರಿಂದ 28.20 ಕಿಮೀ ರವರೆಗಿನ ಜಿಲ್ಲಾ ಮುಖ್ಯ ರಸ್ತೆ ಅಭಿವೃದ್ಧಿ | 29.50 |
| | **ಒಟ್ಟು** | **82.30** |

3. ಅದರಂತೆ, ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಮೊದಲನೇ ಷೆಡ್ಯೂಲ್‌ನ ಐಟಂ 15ರನ್ವಯ ಸಚಿವ ಸಂಪುಟದ ಅನುಮೋದನೆ ಪಡೆದು, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ :

**ಸರ್ಕಾರದ ಆದೇಶ ಸಂಖ್ಯೆ : ಲೋಇ 410 ಸಿಆರ್‌ಎಂ 2012, ಬೆಂಗಳೂರು, ದಿನಾಂಕ : 30-1-2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳನ್ನು, ಒಟ್ಟಾರೆ ರೂ. 82.30 ಕೋಟಿಗಳ (ಎಂಭತ್ತೆರಡು ಕೋಟಿ ಮೂವತ್ತು ಲಕ್ಷಗಳು) ಅಂದಾಜು ವೆಚ್ಚದಲ್ಲಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಹಾಗೂ 2013-14ನೇ ಸಾಲಿನ ಅಪೆಂಡಿಕ್ಸ್-ಇ ನಲ್ಲಿ ಸೇರಿಸಲು ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಕೋಟಿ ರೂ.ಗಳಲ್ಲಿ) |
|---|---|---|
| 1. | ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ದೇವದುರ್ಗದಿಂದ ಕೋಣಚಪಳಿ-ಮಾದ್ಯರಗೋಳ ಜಿಲ್ಲಾ ಮುಖ್ಯ ರಸ್ತೆ 0.00 ಕಿಮೀ ರಿಂದ 27.40 ಕಿಮೀ ರವರೆಗೆ ಅಭಿವೃದ್ಧಿ | 29.30 |
| 2. | ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ದೇವದುರ್ಗ ಕ್ರಾಸ್‌ನಿಂದ ಮಾತಪಳ್ಳಿ ವಯಾ ಸೂಗರಾಳ, ಗುಂಡಗುತ್ತಿ ಜಿಲ್ಲಾ ಮುಖ್ಯ ರಸ್ತೆ ಕಿಮೀ 0.00 ರಿಂದ 21.00 ಕಿಮೀರವರೆಗೆ ಅಭಿವೃದ್ಧಿ | 23.50 |
| 3. | ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ, ಅರೆಕೇರಾ ಕ್ರಾಸ್‌ನಿಂದ ವಯಾ ಗಲಗ ನಾರಬಂಡದವರೆಗೆ 0.00 ರಿಂದ 28.20 ಕಿಮೀ ರವರೆಗಿನ ಜಿಲ್ಲಾ ಮುಖ್ಯ ರಸ್ತೆ ಅಭಿವೃದ್ಧಿ | 29.50 |
| | **ಒಟ್ಟು** | **82.30** |

2. ಮೇಲಿನ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳತಕ್ಕದ್ದು ಮತ್ತು ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೃಷ್ಣಮೂರ್ತಿ ಬಿ. ಕುಲಕರ್ಣಿ**
ಸರ್ಕಾರದ ಉಪ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ ಮತ್ತು ಕಟ್ಟಡಗಳು).

P.R. 599

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** 2012-13ನೇ ಸಾಲಿಗೆ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗೆ ಯೋಜನೇತರ ಅಡಿಯಲ್ಲಿ ಒದಗಿಸಲಾಗಿರುವ ಆಯವ್ಯಯದ ನಾಲ್ಕನೇ ತ್ರೈಮಾಸಿಕ ಕಂತನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಐ 67 ಎಸ್‌ಎಲ್‌ವಿ 2011, ದಿನಾಂಕ : 06-06-2012.
2. ಸರ್ಕಾರದ ಆದೇಶ ಸಂಖ್ಯೆ : ಸಿಐ 67 ಎಸ್‌ಎಲ್‌ವಿ 2011, ದಿನಾಂಕ : 16-08-2012.
3. ಸರ್ಕಾರದ ಆದೇಶ ಸಂಖ್ಯೆ : ಸಿಐ 67 ಎಸ್‌ಎಲ್‌ವಿ 2011, ದಿನಾಂಕ : 26-12-2012.
4. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಪತ್ರ ಸಂ. ಕೈವಾಇ/ವಿಶ್ವ/ಎ2/ಖಾಮಂ/ಯೋಜನೇತರ/48/2012-13, ದಿನಾಂಕ : 02-02-2013.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1) ರಿಂದ (3)ರಲ್ಲಿ ಓದಲಾದ ದಿನಾಂಕ : ಸರ್ಕಾರದ ಆದೇಶಗಳಲ್ಲಿ ಆಯವ್ಯಯದ ಮೊದಲನೇ, ಎರಡನೇ ಮತ್ತು ಮೂರನೇ ತ್ರೈಮಾಸಿಕ ಕಂತು ತಲಾ ರೂ. 300.00 ಲಕ್ಷಗಳಂತೆ, ಒಟ್ಟು ರೂ. 900.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಕ್ರಮಾಂಕ (4)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗೆ 2012-13ನೇ ಸಾಲಿನ ವಾರ್ಷಿಕ ಆಯವ್ಯಯದ ಯೋಜನೇತರ ಲೆಕ್ಕಶೀರ್ಷಿಕೆ 2851-00-105-0-01-101 ರಡಿ ರೂ. 1200.00 ಲಕ್ಷಗಳನ್ನು ಒದಗಿಸಲಾಗಿದ್ದು, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರು ಮಂಡಳಿಯ ಸಿಬ್ಬಂದಿಯ ವೇತನ ಭತ್ಯೆ, ಪ್ರವಾಸ ಭತ್ಯೆ, ನಿವೃತ್ತ ನೌಕರರ ಪಿಂಚಣಿ, ಮತ್ತು ಕಛೇರಿ ಸಾದಿಲ್ವಾರು ವೆಚ್ಚಗಳನ್ನು ಭರಿಸಲು ನಾಲ್ಕನೇ ತ್ರೈಮಾಸಿಕ ಕಂತು ರೂ. 300.00 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿದ್ದು, ನಾಲ್ಕನೇ ತ್ರೈಮಾಸಿಕ ಕಂತು ರೂ. 300.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2851-00-105-0-01-101 ರಡಿ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರಿಗೆ ಬಿಡುಗಡೆ ಮಾಡುವಂತೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 67 ಎಸ್‌ಎಲ್‌ವಿ 2011, ಬೆಂಗಳೂರು, ದಿನಾಂಕ : 15-03-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ 2012-13ನೇ ಸಾಲಿನಲ್ಲಿ ಸಿಬ್ಬಂದಿ ವೇತನ, ನಿವೃತ್ತ ನೌಕರರ ಪಿಂಚಣಿ, ಪ್ರವಾಸ ಭತ್ಯೆ, ಮತ್ತು ಕಛೇರಿಯ ಸಾದಿಲ್ವರು ವೆಚ್ಚ ಮುಂತಾದ ಖರ್ಚುಗಳನ್ನು ಭರಿಸಲು 2012-13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2851-00-105-0-01-101 (ಯೋಜನೇತರ) ರಡಿ ನಾಲ್ಕನೇ ತ್ರೈಮಾಸಿಕ ಕಂತು ರೂ. 300.00 ಲಕ್ಷ (ಮುನ್ನೂರು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು :**

1. ಹಣ ಸ್ವೀಕೃತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲುಸಹಿಯೊಂದಿಗೆ ಖಜಾನೆಯಿಂದ ಹಣ ಪಡೆಯಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ. ಸದರಿ ಅನುದಾನವನ್ನು ಯಾವ ಉದ್ದೇಶಕ್ಕಾಗಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಮಾತ್ರ ಬಳಸತಕ್ಕದ್ದು.
2. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ಸದರಿ ಮಂಡಳಿಯು ಅನುದಾನವನ್ನು ಸದ್ಬಳಕೆ ಮಾಡುತ್ತಿದೆಯೇ ಎಂಬ ಬಗ್ಗೆ ಮಂಡಳಿಯ ಕಾರ್ಯಕ್ಷಮತೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು.
3. ಹಣ ವೆಚ್ಚ ಮಾಡಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು (Utilization Certificate) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ಹಾಗೂ ಸರ್ಕಾರಕ್ಕೆ ತಪ್ಪದೇ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 307 Exp-1/13, ದಿನಾಂಕ : 08-03-2013 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಮತ್ತು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 04 ಟಿಎಫ್‌ಪಿ 2012, ದಿನಾಂಕ : 27-04-2012 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್. ಎಸ್. ಶ್ರೀಕಂಠಬಾಬು**
ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**P.R. 600**

## COMMERCE AND INDUSTRIES SECRETARIAT

**SUB:** Reimbursement of Central Sales Tax paid on inter-state sale of metro coaches by M/s BEML Ltd. to Delhi Metro Rail Corporation Ltd., - Reg.

**READ:**
1) G.O. NO. FD 283 CSL 2009, DATED: 08-12-2009
2) G.O. NO. CI 430 SPI 2010, DATED: 20-09-2010, 21-02-2011, 21-11-2011 & 16-12-2011.
3) LETTER No. AR-1/DMRCL/VAT/2012, dated: 04-09-2012, 21-09-2012, 08-11-2012, 21-11-12, 05-01-2013 & 31-01-2013 from BEML Ltd., Bangalore.
4) Letter No. AR-1/BMRCL/KVAT/2012, dated: 07-02-2013 from BEML Ltd., Bangalore.

**PREAMBLE:**

In the Govt. Order read at (1) above, sanction was accorded for reimbursement fo tax paid under the Central Sales Tax Act, 1956 by BEML, on its Inter-State sale of Metro coaches to Delhi Metro Rail Corporation Ltd.

In the G.O's read at (2) above, Rs. 69,78,00,039 (46,88,00,000/- 13,42,64,868/- 2,24,25,549/- 7,23,09,622/-) was released towards reimbursement of Central Sales Tax to BEML paid up to March 2011 interest free loan to be converted into grant subsequently.

The BEML Ltd., has submitted the tax paid certificate for the months of May 2012 to November 2012 and has requested to reimburse Rs. 15,82,64,877/-.

**GOVERNMENT ORDER NO: CI 430 SPI 2010, BANGALORE, DATED: 28-03-2013**

For the reasons explained above, sanction is hereby accorded for the release of Rs. 2,18,61,223/- (Rupees Two crore Eighteen Lakh Sixty-one thousand Two hundred and Twenty-three only) under the Head of A/c **"2852-80-800-0-43"** for the year 2012-13 towards reimbursement fo Central Sales Tax to BEML for the months of May 2012 and June 2012 (partly). The remaining part of reimbursement for JUne 2012 and further will be considered in the next financial year i.e. 2013-14.

The Deputy General Manager (Finance & Accounts), Bangalore Complex, BEML Ltd., is authorised to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with reference to Finance Department's Note NO. FD 42 CSL 2013, dated 26-03-2013.

By Order and in the name of the Governor of Karnataka
**SHIVASHANKAR NAIK. L**
Desk Officer (Technical Cell),
Commerce & Industries Department.

**P.R. 575**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಅಂಚೆಕುಮಾರ, ಪಿ.ಸಿ.–385, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/47/2011–12 ದಿನಾಂಕ: 07–6–2012
2. ಮೇಲ್ಮನವಿ ಪ್ರಾಧಿಕಾರ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು–11/2012–13 ದಿನಾಂಕ: 07–8–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–11–2012
4. 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)63/2012–13 ದಿನಾಂಕ: 21–12–2012 ಮತ್ತು 16–01–2013

**ಪ್ರಸ್ತಾವನೆ:**

ಶ್ರೀ ಅಂಚೆಕುಮಾರ, ಪಿ.ಸಿ.–385, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿ, ಅಶಿಸ್ತು, ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1. "ಶ್ರೀ ಅಂಚೆಕುಮಾರ, ಪಿ.ಸಿ.–385, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಆದ ನೀವು ಪತ್ನಿಯ ಅನಾರೋಗ್ಯದ ನಿಮಿತ್ತ ದಿ: 23–5–2011 ರಿಂದ 29–5–2011ರ ವರೆಗೆ 07 ದಿನಗಳ ಪರಿವರ್ತಿತ ಪೂರ್ಣ ರಜೆ ಮೇಲೆ ತೆರಳಿ ದಿ: 30–5–2011 ರಂದು ಕರ್ತವ್ಯಕ್ಕೆ ಹಾಜರಾಗದೇ ದಿನಾಂಕ: 30–5–2011 ರಿಂದ ರಜೆ ಮೀರಿ ಗೈರು ಹಾಜರಾದ ಬಗ್ಗೆ ಕಂಪನಿ ಕಮಾಂಡರ "ಎ" ದಳ ರವರು ಗೈರುಹಾಜರಿ ವರದಿಯನ್ನು ಸಲ್ಲಿಸಿದ ಪತ್ರದನ್ವಯ 21 ದಿನಗಳ ನಂತರ ಕರ್ತವ್ಯ ಪರಿತ್ಯಾಗ ಸೂಚನಾ ಪತ್ರ ಹೊರಡಿಸಿ ಮರಳಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು. ನೀವು ದಿ: 01–7–2011 ರಂದು ಕರ್ತವ್ಯ ಪರಿತ್ಯಾಗ ಸೂಚನಾ ಪತ್ರವನ್ನು ಸ್ವೀಕರಿಸಿ ಕರ್ತವ್ಯಕ್ಕೆ ಹಾಜರಾಗದೇ ಗೈರು ಹಾಜರಿಯಲ್ಲೇ ಮುಂದುವರೆದ ಹಿನ್ನೆಲೆಯಲ್ಲಿ ನಿಮಗೆ ದಿ: 02–8–2011ರ ಪತ್ರದಲ್ಲಿ ಮತ್ತೊಮ್ಮೆ ಕರ್ತವ್ಯ ಪರಿತ್ಯಾಗ ಸೂಚನಾ ಪತ್ರವನ್ನು ಹೊರಡಿಸಲಾಗಿತ್ತು. ನೀವುಗಳು ಸದರಿ ಕರ್ತವ್ಯ ಪರಿತ್ಯಾಗ ಸೂಚನಾ ಪತ್ರವನ್ನು ದಿನಾಂಕ: 09–8–2011 ರಂದು ಸ್ವೀಕರಿಸಿ ನಂತರವು ಮರಳಿ ಕರ್ತವ್ಯಕ್ಕೆ ಹಾಜರಾಗದೆ ಇಲ್ಲಿಯವರೆಗೆ ಗೈರುಹಾಜರಿಯಲ್ಲೇ ಮುಂದುವರೆದು ತೀವ್ರ ಕರ್ತವ್ಯ ನಿರ್ಲಕ್ಷತೆ, ಬೇಜವಾಬ್ದಾರಿ ಹಾಗೂ ಅಶಿಸ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ.
2. ಶ್ರೀ ಅಂಚೆಕುಮಾರ, ಪಿ.ಸಿ.–385, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ನೀವು ಕರ್ತವ್ಯಕ್ಕೆ ಪದೇ ಪದೇ ಗೈರುಹಾಜರಾಗುವ ಹವ್ಯಾಸ ಉಳ್ಳವರಾಗಿದ್ದು, ಈ ಹಿಂದೆ ತಮ್ಮ ಸೇವಾವಧಿಯಲ್ಲಿ 39 ಬಾರಿ ಅನಧಿಕೃತ ಗೈರುಹಾಜರಿಯಾಗಿರುತ್ತೀರಿ ಮತ್ತು ನಿಮಗೆ ಅನೇಕ ಬಾರಿ ಶಿಕ್ಷೆಗಳನ್ನು ವಿಧಿಸಿದರೂ ಸಹ ನಿಮ್ಮ ನಡತೆಯಲ್ಲಿ ಯಾವುದೇ ಉತ್ತಮ ಪರಿವರ್ತನೆ ಮಾಡಿಕೊಳ್ಳದೇ ಒಂದು ಶಿಸ್ತಿನ ಪೊಲೀಸ್ ಇಲಾಖೆಯಲ್ಲಿದ್ದು, ತೀವ್ರ ಕರ್ತವ್ಯ ನಿರ್ಲಕ್ಷತೆ, ಬೇಜವಾಬ್ದಾರಿ ಮತ್ತು ಅಶಿಸ್ತು ದುರ್ನಡತೆ ಪ್ರದರ್ಶಿಸಿರುವಿರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 07–6–2012ರ ಆದೇಶದಲ್ಲಿ ಅರ್ಜಿದಾರರನ್ನು **ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ಹಾಗೂ ದಿನಾಂಕ: 30–5–11 ರಿಂದ 28–11–11ರ ವರೆಗಿನ 183 ದಿನಗಳನ್ನು ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ.**

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 07–8–2012ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಇವರನ್ನು ಸೇವೆಗೆ ಪುನರ್ ನೇಮಕ ಮಾಡಿ, ಸದರಿಯವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ ಆದೇಶದ ದಿನಾಂಕ: 20–6–2012 ರಿಂದ ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವವರೆಗಿನ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ ಅವಧಿಯೆಂದು (Dies non) ಪರಿಗಣಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ 05 (ಐದು) ವರ್ಷಗಳ ಕಾಲ ಮುಂದೂಡಿದೆ, ಸದರಿಯವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 30–5–2011 ರಿಂದ 28–11–2011 ರವರೆಗಿನ 183 ದಿನಗಳನ್ನು ವೇತನ ರಹಿತ ರಜೆಯೆಂದು ಪರಿಗಣಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷತನ, ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿದ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 8 ಪೊಸಿಅ 2013 ಬೆಂಗಳೂರು, ದಿನಾಂಕ: 04-6-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಂಚೆಕುಮಾರ, ಪಿ.ಸಿ.-385, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.680**
**S/C.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಜಮಖಂಡಿ ಶಹರ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ-3/ಪಿಆರ್/49/2010 (ಆ.ಪು. ಸಂಖ್ಯೆ:167/2010) ದಿನಾಂಕ: 04-6-2010
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/39/ಉವ/2010 ದಿನಾಂಕ: 24-8-2010
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19-9-2010
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)61/2010-11 ದಿನಾಂಕ: 03-10-2012

**ಪ್ರಸ್ತಾವನೆ:**

ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಜಮಖಂಡಿ ಶಹರ ಪೊಲೀಸ್ ಠಾಣೆ, ಇವರು ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ಘೋರ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

> "ಆಪಾದಿತ ಪೊಲೀಸ್ ಅಧಿಕಾರಿಯಾದ ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಆದ ನೀವು ಜಮಖಂಡಿ ಶಹರದಲ್ಲಿ ವೀಡಿಯೋ ಗೇಮ್ಸ್ ಗಳಂತಹ ಜೂಜಾಟ ಹತ್ತಿಕ್ಕುವಲ್ಲಿ ವಿಫಲರಾಗಿ ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 04-6-2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24-8-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ ಮತ್ತು ಬೇಜವಾಬಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 152 ಪೊಸಿಅ 2010 ಬೆಂಗಳೂರು, ದಿನಾಂಕ: 19-02-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಜಮಖಂಡಿ ಶಹರ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.618**
**S/C.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶಾಂತಪ್ಪಾ ಎ.ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಡಿಇ/52/2009 (ಓ.ಬಿ. ಸಂಖ್ಯೆ: 279/2010) ದಿನಾಂಕ: 11-02-2010

2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/33/ಈವ/2010 ದಿನಾಂಕ: 11-5-2011

3. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 26-5-2011

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/16/2011-12 ದಿನಾಂಕ: 30-4-2012 & 26-9-2012

5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 202 ಸಿಎನ್‌ಎಸ್ 12 ದಿನಾಂಕ: 01-4-2013

**ಪ್ರಸ್ತಾವನೆ:**

ಶ್ರೀ ಶಾಂತಪ್ಪಾ ಎ.ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ಲಕ್ಷತನ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:-**

"ನೀವು ಪೊಲೀಸ್ ಉಚಿತ ಆಹಾರ ಧಾನ್ಯ ಅಂಗಡಿಯ ಪ್ರಭಾರ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ಪೊಲೀಸ್ ಉಚಿತ ಆಹಾರ ಧಾನ್ಯ ಏಪ್ರಿಲ್-09, ಮೇ-09 ಮತ್ತು ಜೂನ್-09 ತಿಂಗಳುಗಳ ಅವಧಿಗೆ ಆದೇಶದ ಪ್ರತಿಗಳನ್ನು ಪಡೆದು ನಂತರ ನೀವು ನಿಮ್ಮ ಘಟಕಾಧಿಕಾರಿಗಳ ಗಮನಕ್ಕೆ ತರದೆ ಹಾಗೂ ಧಾನ್ಯಗಳನ್ನು ಎತ್ತುವಳಿ ಮಾಡದೆ ಕರ್ತವ್ಯದಲ್ಲಿ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 11-02-2010ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ದಕ್ಕೆಯಾಗದಂತೆ 2 ವರ್ಷಕಾಲ ಮುಂದೂಡಲಾಗಿದೆ. ದಿನಾಂಕ: 30-09-09 ರಿಂದ 10-02-10ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11-05-2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 52 ಪೊಸಿಅ 2011 ಬೆಂಗಳೂರು, ದಿನಾಂಕ: 24-4-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಾಂತಪ್ಪಾ ಎ.ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ, ಇವರ ಪರಿಷ್ಕರಣ ಮೇಲ್ಮನವಿಯ ಅರ್ಜಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.651
S/C.30

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎ.ಎಫ್. ಲಕ್ಕೈಬೈಲ, ಸಿ.ಹೆಚ್.ಸಿ-1651, ಯಮಕನಮರಡಿ ಪೊಲೀಸ್ ಠಾಣೆ, ಬೆಳಗಾವಿ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ-2/ಇವಿ/22/2006 (ಆ.ಪು. ಸಂಖ್ಯೆ: 622/2007) ದಿನಾಂಕ: 19-06-2007

2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/183/ ಉವ/2007 ದಿನಾಂಕ: 13-02-2008

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 21–3–2011
4. 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)3/2011–12 ದಿನಾಂಕ: 31–7–2012 ಮತ್ತು 27–9–2012

**ಪ್ರಸ್ತಾವನೆ:**

ಶ್ರೀ ಎ.ಎಫ್. ಲಕ್ಕೆಬೈಲ, ಸಿ.ಹೆಚ್.ಸಿ–1651, ಇವರು ಕುಡುಚಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ವಿಮುಖತೆ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಅಪೊಅ ಸಿಹೆಚ್‌ಸಿ 1651, ಎ.ಎಫ್. ಲಕ್ಕೇಬೈಲ ಕುಡುಚಿ ಪೊಲೀಸ್ ಠಾಣೆ, ರವರಾದ ನೀವು ದಿನಾಂಕ: 02–11–2006ರಂದು ಠಾಣೆಯ ಚಾರ್ಜದಲ್ಲಿದ್ದಾಗ ಶ್ರೀ ಮಹದೇವಪ್ಪಾ ಭೀಮಪ್ಪಾ ಮಾಳೇದ ಸಾಳ ಹೊಸಯರಗುದ್ರಿ ತಾ:ಗೋಕಾಕ ಮತ್ತು ಇತರ 5 ಜನರು ತನ್ನ ಮಗಳಾದ ಭಾರತಿ ಇವಳಿಗೆ ಅವಳಗಂಡನ ಮನೆಯವರು ಕಿರುಕುಳ ನೀಡುತ್ತಿರುವ ಬಗ್ಗೆ ದೂರುಕೂಡಲು ಬಂದಾಗ ನೀವ ಸದರಿಯವರ ಫಿಯಾಧಿ ತೆಗೆದುಕೊಂಡು ಪ್ರಕರಣ ದಾಖಲಿಸದೇ ಅವರಿಗೆ ಠಾಣೆಯಲ್ಲಿ ಕೂಡಿಸಿ ರಾಜೀ ಆಗುವಂತೆ ಒತ್ತಾಯಿಸಿ ಜೀವದ ಬೆದರಿಕೆ, ಅವಾಚ್ಯ ಬೈದು ಕೈಯಿಂದ ಹೊಡೆದು ನಿಮ್ಮ ಕರ್ತವ್ಯದಲ್ಲಿ ಘೋರ ವಿಮುಖತೆ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಆರಕ್ಷಕಾಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19–06–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಅವರ ಮುಂಬರುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿ ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸಲು ಹಾಗೂ ದಿನಾಂಕ: 11–11–2006 ರಿಂದ 31–3–2007ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 13–02–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ವಿಮುಖತೆ ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 32 ಪೊಸಿಅ 2011 ಬೆಂಗಳೂರು, ದಿನಾಂಕ: 31-01-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಎಫ್. ಲಕ್ಕೆಬೈಲ, ಸಿ.ಹೆಚ್.ಸಿ–1651, ಯಮಕನಮರಡಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.633
S/C.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಜಿ. ಲಮಾಣಿ, ಎ.ಹೆಚ್.ಸಿ.–05, ಡಿ.ಎ.ಆರ್. ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಇವಿ(8)/2007 (ಓ.ಬಿ. ಸಂಖ್ಯೆ: 26/2009) ದಿನಾಂಕ: 22–01–2009
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು(12)ಉವ/2009 ದಿನಾಂಕ: 29–9–2010
3. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 09–8–2011
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/34/2011–12 ದಿನಾಂಕ: 12–10–2012
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 201 ಸಿಎನ್‌ಎಸ್ 12 ದಿನಾಂಕ: 01–4–2013

**ಪ್ರಸ್ತಾವನೆ:**

ಶ್ರೀ ಎಸ್.ಜಿ. ಲಮಾಣಿ, ಎ.ಹೆಚ್.ಸಿ.–05, ಡಿ.ಎ.ಆರ್. ಹಾವೇರಿ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:–**

> "ಎ.ಹೆಚ್.ಸಿ.–05, ಶ್ರೀ ಎಸ್.ಜಿ. ಲಮಾಣಿ, ಡಿ.ಎ.ಆರ್. ಹಾವೇರಿ, ನೀವು ಶಿಸ್ತು ಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಶ್ರೀಮತಿ ಶಾಂತವ್ವ ಇವರೊಂದಿಗೆ ಸಾಂಪ್ರದಾಯಿಕವಾಗಿ ವಿವಾಹವಾಗಿ ಶ್ರೀಮತಿ ಶಾಂತವ್ವ, ಇವರು ಜೀವಂತ ಇರುವಾಗಲೇ ಅವರಿಂದ ವಿಚ್ಛೇದನ ಪಡೆಯದೆ ಇಲಾಖೆಗೆ ಯಾವುದೇ ಮಾಹಿತಿ ನೀಡದೇ ಅನುಮತಿ ಪಡೆಯದೇ ಶ್ರೀಮತಿ ಸರೋಜ, ಇವರೊಂದಿಗೆ ದ್ವಿತೀಯ ವಿವಾಹವಾಗಿ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ ಮತ್ತು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ (ನಡತೆ) 1966ರ ನಿಯಮ 22ನ್ನು ಉಲ್ಲಂಘಿಸಿ ತೀವ್ರ ಅಶಿಸ್ತು, ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ದದ ಆರೋಪವು ಸಾಬೀತಾಗಿದ್ದು, ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22–01–2009ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಪದಚ್ಯುತಗೊಳಿಸಿ ಅಮಾನತ್ತಿನ ಅವಧಿ ದಿನಾಂಕ: 05–6–2007 ರಿಂದ 21–6–2007ರ ವರೆಗೆ 17 ದಿವಸಗಳ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಈಗಾಗಲೇ ನೀಡಿದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29–9–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ವೇತನವನ್ನು ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಕೆಳಗೆ ಇಳಿಸಿ, (fresh) ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯುವಂತೆ ಶಿಕ್ಷೆ ವಿಧಿಸಲಾಗಿದೆ. ಸದರಿಯವರು ಸೇವೆಯಿಂದ ಹೊರಗೆ ಉಳಿದ ಅವಧಿಯನ್ನು ಸೇವೆಯಿಂದ ಹೊರಗೆ ಉಳಿದಂತೆಯೇ ಎಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರು ನಡತೆ ನಿಯಮವನ್ನು ಉಲ್ಲಂಘಿಸಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದು, ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಅಂಶಗಳು ಕಂಡುಬರುವುದಿಲ್ಲ. ಆದರೆ ಮೇಲ್ಮನವಿ ಪ್ರಾಧಿಕಾರವು ವಿಧಿಸಿರುವ ದಂಡನೆಯು ತಾಂತ್ರಿಕ ದೋಷಪೂರಿತವಾಗಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 59(1)(ಎ) ರನ್ವಯ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 88 ಪೊಸಿಅ 2011 ಬೆಂಗಳೂರು, ದಿನಾಂಕ: 24–4–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಜಿ. ಲಮಾಣಿ, ಎ.ಹೆಚ್.ಸಿ.–05, ಡಿ.ಎ.ಆರ್. ಹಾವೇರಿ ಜಿಲ್ಲೆ, ಇವರಿಗೆ ವಿಧಿಸಿದ ದಂಡನೆಯನ್ನು ಈ ಕೆಳಕಂಡಂತೆ ಮಾರ್ಪಡಿಸಿ ಆದೇಶಿಸಿದೆ.

1) ಪೊಲೀಸ್ ಹೆಡ್ ಕಾನ್ಸ್‌ಟೇಬಲ್ ಹುದ್ದೆಯ ಕಾಲಿಕ ವೇತನ ಶ್ರೇಣಿಯು ರೂ.6,250–12,000/– ಆಗಿದ್ದು, ಇವರ ವೇತನವನ್ನು ಸದರಿ ಹುದ್ದೆಯ ಕನಿಷ್ಠ ವೇತನ ರೂ.6,250/–ಕ್ಕೆ (ದಿನಾಂಕ: 01–02–2009 ರಿಂದ ಜಾರಿಗೆ ಬರುವಂತೆ) ಮೂರು ವರ್ಷಗಳ ಕಾಲ ಸಂಚಿತ ಪರಿಣಾಮ ರಹಿತ (without cummulative effect) ವಾಗಿ ಇಳಿಸಿದೆ. ದಂಡನೆಯ ಅವಧಿಯಲ್ಲಿ ಇವರು ಯಾವುದೇ ವಾರ್ಷಿಕ ವೇತನ ಬಡ್ತಿಯಾಗಲಿ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ, ಇವರ ವೇತನ ಸ್ಥಿರವಾಗಿರುತ್ತದೆ.
2) ಈ ದಂಡನೆಯು ಶಿಸ್ತು ಪ್ರಾಧಿಕಾರವು ದಂಡನೆ ವಿಧಿಸಿದ ತಿಂಗಳಿನ ಮುಂದಿನ ತಿಂಗಳಿನಿಂದ ಅಂದರೆ ದಿ: 01–02–2009 ರಿಂದ ಜಾರಿಗೆ ಬರುತ್ತದೆ.
3) ಇವರ ದಂಡನೆಯು ದಿ: 01–02–2009 ರಿಂದ 31–01–2012 ರವರೆಗೆ ಮೂರು ವರ್ಷಗಳ ಅವಧಿಗೆ ಅನ್ವಯಿಸುತ್ತದೆ.
4) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸುವುದು.
5) ದಂಡನಾವಧಿಯಾದ ಮೂರು ವರ್ಷಗಳ ಪೂರ್ಣಗೊಂಡ ನಂತರ ಇವರ ವೇತನವನ್ನು ಇವರು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನ ಹಾಗೂ ತಡೆಹಿಡಿಯಲಾಗಿದ್ದ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸೇರಿಸಿ ಕಾಲ್ಪನಿಕವಾಗಿ ಮರುನಿಗದಿಗೊಳಿಸುವುದು.
6) ಸೇವೆಯಿಂದ ಹೊರಗುಳಿದ ಅವಧಿಯನ್ನು Dies-non ಎಂದು ಪರಿಗಣಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.647

S/C.30

## ಆರ್ಥಿಕ ಸಚಿವಾಲಯ

ವಿಷಯ: ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ 08 ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಆಇ 123 ರಾಲೆಪ 2009, ದಿನಾಂಕ:30.11.2012.

2) ನಿಯಂತ್ರಕರ ಪತ್ರ ಸಂಖ್ಯೆ:ಸಿಎಸ್ಎ 1 ಇಟಿಪಿ 90/2012/7258 ದಿ:23.3.2013.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯ ಈ ಕೆಳಕಂಡ 08 ಹುದ್ದೆಗಳನ್ನು ದಿ:27.01.2012ರಿಂದ 31.3.2013ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಆದೇಶ ನೀಡಲಾಗಿತ್ತು.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಲೆಕ್ಕ ಸಹಾಯಕರು | 03 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ರವರ ಪತ್ರಗಳಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಛೇರಿಯ 08 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:01.04.2013 ರಿಂದ ದಿ:31.3.2014ರ ಅವಧಿಯವರೆಗೆ ಅಥವಾ ರಾಜ್ಯ ಲೆಕ್ಕಪತ್ರ ಇಲಾಖೆಯ ಪುನರ್ ಸಂಘಟನೆಯ ಬಗ್ಗೆ ಅನುಮೋದನೆಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 123 ರಾಲೆಪ 2009 ಬೆಂಗಳೂರು, ದಿನಾಂಕ:30.5.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:01.04.2013 ರಿಂದ ದಿ:31.3.2014ರ ಅವಧಿಯವರೆಗೆ ಅಥವಾ ರಾಜ್ಯ ಲೆಕ್ಕಪತ್ರ ಇಲಾಖೆಯ ಪುನರ್ ಸಂಘಟನೆಯ ಬಗ್ಗೆ ಅನುಮೋದನೆಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಅನುಮೋದನೆ ನೀಡಲಾಗಿದೆ.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಲೆಕ್ಕ ಸಹಾಯಕರು | 03 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿ:10.7.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

**PR.679**

## ಆರ್ಥಿಕ ಸಚಿವಾಲಯ

ವಿಷಯ: ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ 19 ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಆಇ 419 ರಾಲೆಪ 2008, ದಿನಾಂಕ:24.01.2013.

2) ನಿಯಂತ್ರಕರ ಪತ್ರ ಸಂಖ್ಯೆ: ರಾಲೆಪ 29 ಇಟಿಪಿ 83/2012/7257 ದಿ:23.3.2013.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯ (ಜಿ.ಕೆ.ವಿ.ಕೆ) ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯ ಈ ಕೆಳಕಂಡ 19 ಹುದ್ದೆಗಳನ್ನು ದಿ:01.01.2013ರಿಂದ 31.3.2013ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಆದೇಶ ನೀಡಲಾಗಿತ್ತು.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು (ಅಪರ ನಿಯಂತ್ರಕರು) | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 02 |
| 03 | ಲೆಕ್ಕ ಸಹಾಯಕರು | 13 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **19** |

ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ರವರ ಪತ್ರದಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಛೇರಿಯ 19 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:01.04.2013 ರಿಂದ ದಿ:31.3.2014ರ ಅವಧಿಯವರೆಗೆ ಅಥವಾ ರಾಜ್ಯ ಲೆಕ್ಕಪತ್ರ ಇಲಾಖೆಯ ಪುನರ್ ಸಂಘಟನೆಯ ಬಗ್ಗೆ ಅನುಮೋದನೆಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 419 ರಾಲೆಪ 2008 ಬೆಂಗಳೂರು, ದಿನಾಂಕ:1.6.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ (ಜಿ.ಕೆ.ವಿ.ಕೆ) ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:01.04.2013 ರಿಂದ ದಿ:31.3.2014ರ ಅವಧಿಯವರೆಗೆ ಅಥವಾ ರಾಜ್ಯ ಲೆಕ್ಕಪತ್ರ ಇಲಾಖೆಯ ಪುನರ್ ಸಂಘಟನೆಯ ಬಗ್ಗೆ ಅನುಮೋದನೆಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಅನುಮೋದನೆ ನೀಡಲಾಗಿದೆ.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು (ಅಪರ ನಿಯಂತ್ರಕರು) | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 02 |
| 03 | ಲೆಕ್ಕ ಸಹಾಯಕರು | 13 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **19** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿ:10.7.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

PR.677

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ.ಸಿ.ಜಿ.ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಭಾರತೀಯ ಸೇನೆಯಲ್ಲಿ ಸಲ್ಲಿಸಿದ ಸೇವೆಯನ್ನು ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಸಂಬಂಧ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಆಇ 23 ರಾಲೆಪ 2011 ದಿನಾಂಕ:17.11.2011.
2) ಭಾರತೀಯ ಸೇನಾ ಪ್ರಾಧಿಕಾರದ ಪತ್ರ ಸಂಖ್ಯೆ:1421/958/ಎಸ್‌ಪಿ/ಎನ್‌ಇಆರ್/ಟಿ–1 ದಿನಾಂಕ:19.11.2012.
3) ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ:ಸಿಎಸ್‌ಎ 805 ಎಸ್‌ಪಿಎಫ್ 2012 ದಿನಾಂಕ: 28.2.2013 ಮತ್ತು 22.4.2013.

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:17.11.2011ರಲ್ಲಿ ಶ್ರೀ.ಸಿ.ಜಿ.ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇರುವ ಮುನ್ನ ದಿನಾಂಕ:17.03.1972 ರಿಂದ 21.05.1982ರವರೆಗೆ ಭಾರತೀಯ ಸೇನೆಯಲ್ಲಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 219ಎ(ಎ)ರನ್ವಯ ಸದರೀ ಅವಧಿಯ ಪಿಂಚಣಿ ಜವಾಬ್ದಾರಿಯನ್ನು ಸೇನಾ ಪ್ರಾಧಿಕಾರ ಭರಿಸುವ ಷರತ್ತಿಗೆ ಒಳಪಟ್ಟು ವಿಶ್ರಾಂತಿ ವೇತನ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲಾಗಿತ್ತು. ಆದರೆ, ಭಾರತೀಯ ಸೇನೆಯು ಮೇಲೆ(2)ರಲ್ಲಿ ಓದಲಾದ ದಿನಾಂಕ:19.11.2012ರ ಪತ್ರದಲ್ಲಿ as per para 132 of Pension Regulations for the Army 1961, minimum 15 years of qualifying service is mandatory to become eligibile for pension ಎಂದು ಇರುವುದರಿಂದ ಅಧಿಕಾರಿಯು ಸೇನಾ ಪಿಂಚಣಿಗೆ ಅರ್ಹರಲ್ಲವೆಂದು ತಿಳಿಸಿದೆ. ಹೀಗಾಗಿ ಸೇನಾ ಪ್ರಾಧಿಕಾರವು ಅವರ ಪಿಂಚಣಿ ಜವಾಬ್ದಾರಿಯನ್ನು ಭರಿಸುವುದಿಲ್ಲ. ಮೇಲೆ (3)ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು ಇವರ ಪತ್ರಗಳಲ್ಲಿ ಈ ಪ್ರಸ್ತಾವನೆಯನ್ನು ಪುನರ್ ಪರಿಶೀಲಿಸಿ ಆದೇಶ ಹೊರಡಿಸಲು ಪ್ರಸ್ತಾವನೆ ಸಲ್ಲಿಸಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 105 ರಾಲೆಪ 2013 ಬೆಂಗಳೂರು, ದಿನಾಂಕ: 31.05.2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಶ್ರೀ.ಸಿ.ಜಿ.ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇರುವ ಮುನ್ನ ದಿನಾಂಕ:17.03.1972 ರಿಂದ 21.05.1982ರವರೆಗೆ ಭಾರತೀಯ ಸೇನೆಯಲ್ಲಿ ಸಲ್ಲಿಸಿರುವ ಸೇವಾವಧಿಯ ಪಿಂಚಣಿ ಜವಾಬ್ದಾರಿಯನ್ನು ಭಾರತೀಯ ಸೇನಾ ಪ್ರಾಧಿಕಾರ ಭರಿಸುವುದಿಲ್ಲ ಎಂದು ತಿಳಿಸಿರುವ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ:ಆಇ 23 ರಾಲೆಪ 2011 ದಿನಾಂಕ:17.11.2011ಅನ್ನು ಈ ಮೂಲಕ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

**PR.678**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಂ.ರಘುಕುಮಾರ್, ಸರ್ಕಾರಿ ಅಭಿಯೋಜಕರು ಹಾಲಿ ಅಮಾನತ್ತಿನಲ್ಲಿರುವರು, ಈ ಹಿಂದೆ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ(ಪ್ರಭಾರ) ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಸಂಬಂಧ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಕುರಿತು

**ಓದಲಾಗಿದೆ:**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂ–38/ಸಿಆರ್ –6/2012 /ಸಿ.ಎಂ.ಆರ್, ದಿನಾಂಕ:21.02.2013,
2. ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಚಾಮರಾಜನಗರ– 571 313 ಇವರು ಸಲ್ಲಿಸಿರುವ ಪ್ರಕರಣದ ಅಂತಿಮ ವರದಿಯ ದಿನಾಂಕ:23.01.2013,
3. ತನಿಖಾ ದಾಖಲೆಗಳು– ತನಿಖಾ ವರದಿಯ ನೆರಳಚ್ಚು ಪ್ರತಿ, ಲಂಚದ ಬೇಡಿಕೆಗೆ ಸಂಬಂಧಪಟ್ಟ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಟ್ರ್ಯಾಪ್ ಪೂರ್ವದ ಪಂಚನಾಮೆ, ವಶಪಡಿಸಿಕೊಂಡ ದಾಖಲೆ/ ಸ್ವತ್ತುಗಳ ಪಟ್ಟಿ, ಕೃತ್ಯ ನಡೆದ ಸ್ಥಳದ ನಕ್ಷೆ, ಪ್ರಕರಣದ ಪೋಟೋಗಳ ಪ್ರತಿ, ಸರ್ಕಾರದ ರಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು,

ಮೇಲೆ (1)ರಲ್ಲಿ ಓದಲಾದ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ:21.02.2013 ಪತ್ರದೊಡನೆ ಮೇಲೆ (2)ರಲ್ಲಿ ಓದಲಾದ ತನಿಖಾಧಿಕಾರಿಯಾದ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಚಾಮರಾಜನಗರ ಇವರು ಶ್ರೀ ಹೆಚ್.ಎಂ.ರಘುಕುಮಾರ್, ಸರ್ಕಾರಿ ಅಭಿಯೋಜಕರು ಹಾಲಿ ಅಮಾನತ್ತಿನಲ್ಲಿರುವರು, ಈ ಹಿಂದೆ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ(ಪ್ರಭಾರ) ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಸಂಬಂಧ ತನಿಖೆ ನಡೆಸಿ ಸಲ್ಲಿಸಿರುವ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಕಳುಹಿಸುತ್ತಾರೆ. ಚಾಮರಾಜನಗರದ ಲೋಕಾಯುಕ್ತ ಪೊಲೀಸ್ ಠಾಣೆಯ ಪ್ರಕರಣ ಸಂ:06/2012ನ್ನು ದಾಖಲಿಸಿಕೊಂಡು ನಡೆಸಿದ ತನಿಖೆಯಿಂದ ಆಪಾದಿತರು ಕಲಂ:7, 13(1)(ಡಿ) ಸಹವಾಚನ:13(2) ಲಂಚ ಪ್ರತಿಬಂಧಕ ಕಾಯ್ದೆ–1988ರ ಪ್ರಕಾರ ಅಪರಾಧ ಎಸಗಿರುವುದು ದೃಢಪಟ್ಟಿದೆ. ಆಪಾದಿತ ಗ್ರೂಪ್ ಎ ಅಧಿಕಾರಿಯನ್ನು ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರವಾದ ಸರ್ಕಾರದ ಮಂಜೂರಾತಿ ಆದೇಶ ಅವಶ್ಯಕವಾಗಿರುತ್ತದೆ. ಆದ್ದರಿಂದ, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ:7, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಸದರಿ ಕಾಯ್ದೆ ಕಲಂ 19(1)(ಬಿ)ಯನ್ವಯ, ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಪೂರ್ವಾನುಮತಿಯನ್ನು ಕೋರಿರುತ್ತಾರೆ.

ಆದ್ದರಿಂದ, ಸರ್ಕಾರವು, ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಮೇಲೆ (1)ರಲ್ಲಿ ಓದಲಾದ ದಿನಾಂಕ:21.02.2013ರ ಪತ್ರದೊಡನೆಯ ಕಳುಹಿಸಿರುವ ಮೇಲೆ (2)ರಲ್ಲಿ ಓದಲಾದ ತನಿಖಾಧಿಕಾರಿ, ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಚಾಮರಾಜನಗರ ಇವರ ಅಂತಿಮ ವರದಿ ಹಾಗೂ ಮೇಲೆ (3)ರಲ್ಲಿ ಓದಲಾದ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಮಹಮದ್ ವಸೀಉಲ್ಲಾ ಬಿನ್ ಮಹಮದ್ ಷಫೀಉಲ್ಲಾ, ವಕೀಲರು, ಉತ್ತವಳ್ಳಿ ಗ್ರಾಮ ಮತ್ತು ಅಂಚೆ, ಚಾಮರಾಜನಗರ ತಾಲ್ಲೂಕ್ ಮತ್ತು ಜಿಲ್ಲೆ, ದಿನಾಂಕ:03.11.2012ರ ಫಿರ್ಯಾದು,

2) ಚಾಮರಾಜನಗರದ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ ನಂ:06/2012ರ ಪ್ರಥಮ ವರ್ತಮಾನ ವರದಿಯ ದಿನಾಂಕ:03.11.2012,

3) ಪಂಚನಾಮೆಯ ದಿನಾಂಕ:05.11.2012,

4) ಗುನ್ನಾ ಸ್ಥಳದ ಪಂಚನಾಮೆಯ ದಿನಾಂಕ:05.11.2012,

5) ಕರ್ನಾಟಕ ಸರ್ಕಾರದ ರಸಾಯನಿಕ ಪರೀಕ್ಷಕರು, ಸಾರ್ವಜನಿಕ ಆರೋಗ್ಯ ಸಂಸ್ಥೆ, ಶೇಷಾದ್ರಿ ರಸ್ತೆ, ಬೆಂಗಳೂರು ಇವರ ಪತ್ರದ ಸಂ:PHI/CME/LOK/96/11–12, ದಿನಾಂಕ:27.11.2012,

6) ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋ.ಬಂ. ಹಾಗೂ ಒ.ಜ.ಸಾ. ಇಲಾಖೆ, ನಂ:1, ಉಪವಿಭಾಗ, ಚಾಮರಾಜನಗರ ಇವರ ಪತ್ರದ ಕ್ರ.ಸಂ:ಸಕಾಅ/ನಂ.1/ಲೋಇ/ಉವಿ/ಚಾ.ನಗರ/ಕೃತ್ಯ ನಡೆದ ನಕಾಶೆ/2012–13, ದಿನಾಂಕ:09.11.2012ರೊಡನೆ ಸಲ್ಲಿಸಿರುವ ಕೃತ್ಯ ನಡೆದ ಸ್ಥಳದ ನಕಾಶೆ,

7) ಪ್ರಕರಣಕ್ಕೆ ಸಂಬಂಧಿಸಿದ ಪೋಟೋಗಳು,

8) ಫಿರ್ಯಾದಿ ಮತ್ತು ಸಾಕ್ಷಿಗಳಾದ ಈ ಕೆಳಕಂಡವರ ಹೇಳಿಕೆಗಳು:

1) ಶ್ರೀ ಮಹಮದ್ ವಸೀಂಉಲ್ಲ ಬಿನ್ ಷಫೀಉಲ್ಲಾ, ವಕೀಲರು, ಉತ್ತವಳ್ಳಿ ಗ್ರಾಮ ಮತ್ತು ಅಂಚೆ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ – ಪಿರ್ಯಾದಿದಾರ,

2) ಶ್ರೀ ವೆಂಕಟೇಶ್ ಬಿನ್ ವೆಂಕಟಯ್ಯ, 42 ವರ್ಷ, ಎಫ್.ಡಿ.ಎ, ಅಭಿವೃದ್ಧಿ ಇಲಾಖೆ, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಪಂಚಸಾಕ್ಷಿ–1,

3) ಶ್ರೀ ಆರ್.ಮಂಜುನಾಥ್ ಬಿನ್ ಲೇ. ಎ.ಜೆ.ರಾಧಕೃಷ್ಣ, 29 ವರ್ಷ, ಮುಜರಾಯಿ ಶಾಖೆ, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಪಂಚಸಾಕ್ಷಿ–2,

4) ಶ್ರೀ ಎಂ.ಎನ್.ಕೃಷ್ಣಮೂರ್ತಿ, ಅಧೀಕ್ಷಕರು, ಸರ್ಕಾರಿ ಅಭಿಯೋಜಕರ ಕಛೇರಿ, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ,

5) ಶ್ರೀ ಎಂ.ನಾಗೇಶ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ.

6) ಶ್ರೀ ಎಸ್.ಮೋಹನ್ ಬಿನ್ ಲೇಟ್ ಸತ್ಯನಾರಾಯಣ, 61 ವರ್ಷ, ಮನೆ ನಂ:909, ಎಲ್.ಐ.ಜಿ–2, 3ನೇ ಮುಖ್ಯರಸ್ತೆ, 10ನೇ ಕ್ರಾಸ್, ಶಾರದದೇವಿ ನಗರ, ಮೈಸೂರು ನಗರ.

7) ಶ್ರೀ ಹೆಚ್.ದೊಡ್ಡಯ್ಯ ಬಿಲ್ ಲೇಟ್ ಹುಚ್ಚಯ್ಯ, 62 ವರ್ಷ, ನಿವೃತ್ತ ಪಿ.ಎಸ್.ಐ., ಮನೆ ನಂ:ಎಂ.ಐ.ಜಿ. 18, ಕೆ.ಹೆಚ್.ಬಿ. ಕಾಲೋನಿ, ಟಿ.ಎನ್.ಪುರ ಟೌನ್, ಮೈಸೂರು ಜಿಲ್ಲೆ.

8) ಶ್ರೀ ಅಜಿತ್ ಕುಮಾರ್ ಟಿ., ಸಿ.ಪಿ.ಸಿ. 59, ಚಾಮರಾಜನಗರ ಪಟ್ಟಣ ಪೊಲೀಸ್ ಠಾಣೆ , ಚಾಮರಾಜನಗರ.

9) ಶ್ರೀ ಚಂದ್ರಪ್ಪ, ಮುಖ್ಯ ಪೇದೆ 133, ಗುಂಡ್ಲುಪೇಟೆ ಪೊಲೀಸ್ ಠಾಣೆ, ಗುಂಡ್ಲುಪೇಟೆ , ಚಾಮರಾಜನಗರ ಜಿಲ್ಲೆ.

10) ಶ್ರೀ ಆರ್.ಬಿ.ನಾಗರಾಜು, ಸಹಾಯಕ ಇಂಜಿನೀಯರ್, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಬಂದರು ಮತು ಒಳನಾಡು ಜಲಸಾರಿಗೆ ಇಲಾಖೆ, ನಂ:01, ಉಪ ವಿಭಾಗ, ಚಾಮರಾಜನಗರ.

11) ಶ್ರೀ ನಸ್ರುಲ್ಲಾ ಬಿನ್ ಎಂ.ಅಮಾನುಲ್ಲಾ, 30ವರ್ಷ, ವೃತ್ತಿ:ವ್ಯವಸಾಯ, ದಿನ್ನಳ್ಳಿ ಗ್ರಾಮ, ರಾಮಾಪುರ ಹೋಬಳಿ, ಕೊಳ್ಳೇಗಾಲ ತಾಲ್ಲೋಕ್, ಚಾಮರಾಜನಗರ,

12) ಶ್ರೀ ಬಸವರಾಜಸ್ವಾಮಿ, ಸಿ.ಹೆಚ್.ಸಿ., ಲೋಕಾಯುಕ್ತ ಠಾಣೆ , ಚಾಮರಾಜನಗರ,

13) ಶ್ರೀ ಸಿ.ಪುಟ್ಟಸ್ವಾಮಿ ಆರಾಧ್ಯ, ಸಿ.ಹೆಚ್.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

14) ಶ್ರೀ ಎಂ.ರವೀಂದ್ರ, ಸಿ.ಹೆಚ್.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

15) ಶ್ರೀ ರಾಜೇಂದ್ರಪ್ರಸಾದ್, ಸಿ.ಹೆಚ್.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

16) ಶ್ರೀ ಕುಮಾರಾರಾಧ್ಯ, ಸಿ.ಪಿ.ಸಿ., ಪೊಲೀಸ್ ವಿಭಾಗ, ಲೋಕಾಯುಕ್ತ ಠಾಣೆ, ಚಾಮರಾಜನಗರ,

17) ಶ್ರೀ ತಖೀವುಲ್ಲಾ, , ಸಿ.ಪಿ.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

18) ಶ್ರೀ ಕೆ.ಆರ್. ಮಹೇಶ್, ಎ.ಪಿ.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

19) ಶ್ರೀ ಎನ್.ಶಿವಕುಮಾರ್, ಎ.ಪಿ.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

20) ಶ್ರೀ ಎನ್.ಸುರೇಶ್, ಎ.ಪಿ.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

21) ಶ್ರೀ ಟಿ.ಶಿವಾನಂದ, ಎ.ಪಿ.ಸಿ., ಲೋಕಾಯುಕ್ತ ಠಾಣೆ, ಚಾಮರಾಜನಗರ,

9) ಲಂಚ ಕೇಳಲು ಆಧಾರದ ಕಡತದ ಬಗ್ಗೆ – ಚಾಮರಾಜನಗರದ ಘನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಜಾಮೀನು ಅರ್ಜಿಯನ್ನು ಸಲ್ಲಿಸಿ ಕ್ರಿಮಿನಲ್ ಮಿಸ್ ನಂ:403/2012ರಲ್ಲಿ ದಾಖಲಾಗಿದ್ದು, ಸದರಿ ಜಾಮೀನಿನ ಅರ್ಜಿಯನ್ನು ವಿಚಾರಣಾ ವಿಲೇವಾರಿಗಾಗಿ ಘನ ಸತ್ರ ನ್ಯಾಯಾಲಯವು ಚಾಮರಾಜನಗರದ ಶೀಘ್ರಗತಿ ನ್ಯಾಯಾಲಯಕ್ಕೆ ವರ್ಗಾವಣೆ ಮಾಡಿರುವ ಪ್ರಕರಣ.

10) ಆಪಾಧಿತ ಅಧಿಕಾರಿಯಾದ ಶ್ರೀ ಹೆಚ್.ಎಂ.ರಘುಕುಮಾರ್‌ರವರು ಅವರ ವಿರುದ್ಧದ ಚಾಮರಾಜನಗರದ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂ:06/2012ರ ಪ್ರಕರಣ ದಾಖಲಾದ ಸಂದರ್ಭದಲ್ಲಿ ಚಾಮರಾಜನಗರದ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಸರ್ಕಾರಿ ಅಭಿಯೋಜಕರ ಹುದ್ದೆಯ ಪ್ರಭಾರ ಕಾರ್ಯ ನಿರ್ವಹಿಸುತ್ತಿದ್ದರು. ಪ್ರಸ್ತುತ ಅಮಾನತ್ತಿನಲ್ಲಿರುವ ಅಧಿಕಾರಿಯ ಸಮಜಾಯಿಷಿ, ಹೇಳಿಕೆ.

ಪ್ರಕರಣದ ತನಿಖಾಧಿಕಾರಿಯಾದ ಶ್ರೀ ಕೆ.ಟಿ.ಮ್ಯಾಥ್ಯುಸ್‌ಥಾಮಸ್, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಾಮರಾಜನಗರ ಇವರು ಫಿರ್ಯಾದಿದಾರರಾದ ಶ್ರೀ ಮಹಮದ್ ವಸೀಂಉಲ್ಲ ಬಿನ್ ಷಫೀಉಲ್ಲಾ, ವಕೀಲರು, ಉತ್ತವಳ್ಳಿ ಗ್ರಾಮ ಮತ್ತು ಅಂಚೆ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ ದೂರಿನ ಮೇರೆಗೆ ಆಪಾಧಿತ ಅಧಿಕಾರಿಯಾದ ಶ್ರೀ ಹೆಚ್.ಎಂ.ರಘುಕುಮಾರ್ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ರೀತ್ಯ ಎಸಗಿರುವ ದಂಡನಾರ್ಹ ಅಪರಾಧ ಪ್ರಕರಣದ ಬಗ್ಗೆ ದಿನಾಂಕ:03.11.2012ರಂದು ಚಾಮರಾಜನಗರದ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 06/2012ನ್ನು ದಾಖಲಿಸಿಕೊಂಡಿರುತ್ತಾರೆ.

ಫಿರ್ಯಾದಿದಾರರಾದ ಶ್ರೀ ಮಹಮದ್ ವಸೀಂಉಲ್ಲ ಬಿನ್ ಷಫೀಉಲ್ಲಾ, ವಕೀಲರು, ಉತ್ತವಳ್ಳಿ ಗ್ರಾಮ ಮತ್ತು ಅಂಚೆ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ ಇವರು ಅವರ ಕಕ್ಷಿದಾರರ ಪರವಾಗಿ ಚಾಮರಾಜನಗರದ ಘನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಜಾಮೀನಿನ ಅರ್ಜಿಯನ್ನು ಸಲ್ಲಿಸಿದ್ದು, ಕ್ರಿಮಿನಲ್ ಮಿಸ್ ನಂ:403/2012ರಲ್ಲಿ ದಾಖಲಾಗಿದ್ದು, ಸದರಿ ಜಾಮೀನು ಅರ್ಜಿಯನ್ನು ವಿಚಾರಣಾ ವಿಲೇವಾರಿಗಾಗಿ ಸತ್ರ ನ್ಯಾಯಾಲಯವು ಚಾಮರಾಜನಗರದ ಶೀಘ್ರಗತಿ ನ್ಯಾಯಾಲಯಕ್ಕೆ ವರ್ಗಾವಣೆ ಮಾಡಿರುತ್ತದೆ. ಈ ಕುರಿತು ಅಭಿಯೋಜನೆ ಪರವಾಗಿ ತಕರಾರು ಅರ್ಜಿ ಸಲ್ಲಿಸಲು ದಿನಾಂಕ:31.10.2012ನ್ನು ನ್ಯಾಯಾಲಯವು ನಿಗಧಪಡಿಸಿದ್ದು, ಪಿರ್ಯಾದುದಾರರು ದಿನಾಂಕ:30.10.2012ರ ಸಂಜೆ 5–00ಗಂಟೆಗೆ ಆಪಾಧಿತ ಅಧಿಕಾರಿಯಾದ ಶ್ರೀ ಹೆಚ್.ಎಂ.ರಘುಕುಮಾರ್, ಸರ್ಕಾರಿ ಅಭಿಯೋಜಕರು ಇವರನ್ನು ಅವರ ಕಛೇರಿಗೆ ಭೇಟಿ ನೀಡಿ ತಕರಾರು ಅರ್ಜಿ ಸಲ್ಲಿಸುವ ಬಗ್ಗೆ ಜ್ಞಾಪಿಸಿದಾಗ, ಸರ್ಕಾರಿ ಅಧಿಕಾರಿಯಾದ ಶ್ರೀಯುತರು 'ನೀವು ಸುಮ್ಮನೆ ಬಂದು ಜ್ಞಾಪಿಸಿದರೆ ಪ್ರಯೋಜನ ಇಲ್ಲ ನನ್ನನ್ನು ಬಂದು ನೋಡಬೇಕು' ಎಂದು ಸರ್ಕಾರಿ ಕೆಲಸವನ್ನು ಮಾಡಲು ಕೈಸನ್ನೆಯ ಮೂಲಕ ಹಣಕ್ಕೆ ಒತ್ತಾಯಿಸಿ ಅಕ್ರಮ ಸಂಭಾವನೆಯನ್ನು ಕೋರಿರುತ್ತಾರೆ. ಲಂಚ ನೀಡಲು ಇಚ್ಛೆ ಇಲ್ಲದಿದ್ದರಿಂದ, ಪಿರ್ಯಾದುದಾರರು ದಿನಾಂಕ:31.10.2012ರಂದು ಚಾಮರಾಜನಗರದ ಲೋಕಾಯುಕ್ತ ಠಾಣೆಗೆ ಹಾಜರಾಗಿ ಪೊಲೀಸ್ ಇನ್ಸ್‌ಪೆಕ್ಟರ್‌ರವರ ಬಳಿ ಲಂಚ ಕೋರಿಕೆಯ ವಿಷಯವನ್ನು ತಿಳಿಸಿ ಡಿಜಿಟಲ್ ವಾಯ್ಸ್ ರೆಕಾರ್ಡರ್‌ನ್ನು ಪಡೆದುಕೊಂಡು ಅದೇ ದಿನ ಸುಮಾರು 11–00ಗಂಟೆಯ ಸಮಯದಲ್ಲಿ ಚಾಮರಾಜನಗರದ ಶೀಘ್ರಗತಿ ನ್ಯಾಯಾಲಯಕ್ಕೆ ಹಾಜರಾದಾಗ ಘನ ನ್ಯಾಯಾಲಯವು ಪ್ರಕರಣವನ್ನು ಕರೆದು ತಕರಾರಿಗೆ ಇಟ್ಟುಕೊಂಡಿರುವುದನ್ನು ತಿಳಿದು, ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಎಂ.ರಘುಕುಮಾರ್‌ರವರನ್ನು ಜಿಲ್ಲೆಯ ಸತ್ರ ನ್ಯಾಯಾಲಯದಲ್ಲಿ ಭೇಟಿ ಮಾಡಿ ವಿಚಾರ ಮಾಡಿದಾಗ ಅಬ್ಜೆಕ್ಷನ್ ಹಾಕುವ ಸರ್ಕಾರಿ ಕೆಲಸವನ್ನು ಮಾಡಲು `.2000–00ಗಳ ಅಕ್ರಮ ಸಂಭಾವನೆಯನ್ನು ನೀಡುವಂತೆ, ಇಲ್ಲದಿದ್ದಲ್ಲಿ ಮುಂದಕ್ಕೆ ಡೇಟ್ ಹಾಕಿಸುತ್ತೇನೆಂದು, ಕೋರಿರುವ `.2000–00ಗಳ ಲಂಚದ ಹಣವನ್ನು ದಿನಾಂಕ:05.11.2012ರಂದು ತಂದು ಕೊಡುವಂತೆ ಒತ್ತಾಯಿಸಿರುತ್ತಾರೆ. ಈ ಬಗ್ಗೆ ದಿನಾಂಕ:03.11.2012ರಂದು ಪಿರ್ಯಾದಿಯು ಚಾಮರಾಜನಗರದ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಪಿರ್ಯಾದನ್ನು ಸಲ್ಲಿಸಿದ್ದು, ತನಿಖಾಧಿಕಾರಿಯು ಮೊಕದ್ದಮೆ ಸಂಖ್ಯೆ: 06/2012ನ್ನು ದಾಖಲಿಸಿಕೊಂಡು, ಸಂಪೂರ್ಣ ತನಿಖಾ ಕ್ರಮವನ್ನು ಕೈಗೊಂಡಿರುತ್ತಾರೆ. ಅದರನ್ವಯ, ದಿನಾಕ:05.11.2012ರ ಬೆಳಿಗ್ಗೆ 10.15ಗಂಟೆ ಸಮಯಕ್ಕೆ ಪಂಚ–2ರವರೊಂದಿಗೆ ಆರೋಪಿತ ಅಧಿಕಾರಿಯ ಕಛೇರಿಗೆ ಹೋದಾಗ, ಪಂಚ–2ರವರನ್ನು ಹೊರಗಡೆ ಇರುವಂತೆ ತಿಳಿಸಿ, ಪಿರ್ಯಾದಿಯವರು ಅಬ್‌ಜೆಕ್ಷನ್ ಹಾಕುವ ಬಗ್ಗೆ ಕೇಳಿದಾಗ ಕೈ ಸನ್ನೆ ಮೂಲಕ ಲಂಚದ ಹಣಕ್ಕೆ ಒತ್ತಾಯಿಸಿ ಪಿರ್ಯಾದಿಯವರಿಂದ '.2000–00ಗಳನ್ನು ಲಂಚದ ಹಣವನ್ನು ತಮ್ಮ ಎಡಗೈನಿಂದ ಪಡೆದು ಎರಡು ಕೈಗಳಿಂದ ಎಣಿಸಿ ತಮ್ಮ ಪ್ಯಾಂಟಿನ ಬಲಭಾಗದ ಹಿಂಬದಿಯ ಪಾಕೇಟ್‌ನಲ್ಲಿ ಇಟ್ಟುಕೊಂಡಿರುತ್ತಾರೆ. ಅಕ್ರಮ ಸಂಭಾವನೆಯ ಹಣವಾದ `.2000–00ಗಳನ್ನು ಆಪಾದಿತ ಶ್ರೀ ಹೆಚ್.ಎಂ.ರಘುಕುಮಾರ್ ಇವರಿಂದ ಪಂಚರ ಸಮಕ್ಷಮದಲ್ಲಿ ವಶಪಡಿಸಿಕೊಂಡು, ಪಂಚರಿಂದ ಪರಿಶೀಲಿಸಿದಾಗ ಅದು ಎಂಟ್ರುಸ್ಟ್‌ಮೆಂಟ್ ಮಹಜರ್ ಸಮಯದಲ್ಲಿ ಪಂಚರು ಬರೆದುಕೊಂಡಿದ್ದ ಹಣಗಳ ವಿವರ ಮತ್ತು ನಂಬರುಗಳಿಗೆ ತಾಳೆಯಾಗಿರುತ್ತದೆ. ಆಪಾಧಿತ ಸಾರ್ವಜನಿಕ ಅಧಿಕಾರಿಯ ಎರಡೂ ಕೈಗಳ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಿಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಲ್ಲೂ ಸಹ ಧೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಪಿರ್ಯಾಧಿ ಹಾಗೂ ಆಪಾಧಿತ ಸಾರ್ವಜನಿಕ ಅಧಿಕಾರಿಯ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರಾದ ಶ್ರೀ ಹೆಚ್.ಎಂ.ರಘುಕುಮಾರ್ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ–1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 19(1)(ಬಿ) ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸರ್ಕಾರವು ಶ್ರೀ ಹೆಚ್.ಎಂ.ರಘುಕುಮಾರ್ ಸರ್ಕಾರಿ ಅಭಿಯೋಜಕರು ಹಾಲಿ ಅಮಾನತ್ತಿನಲ್ಲಿರುವರು, ಈ ಹಿಂದೆ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ(ಪ್ರಭಾರ) ಇವರನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾಗಿದೆ. ಆಪಾದಿತ ಅಧಿಕಾರಿ ಸರ್ಕಾರಿ ಕೆಲಸವನ್ನು ಮಾಡಲು ದಿನಾಂಕ:05.11.2012 ರಂದು ಪಿರ್ಯಾದಿದಾರರಿಂದ ಒಟ್ಟು `.2000/–ಗಳ ಲಂಚದ ಹಣಕ್ಕೆ ಬೇಡಿಕೆ ಇಟ್ಟು, ಸ್ವೀಕರಿಸಿದ ಬಗ್ಗೆ ಪಿರ್ಯಾದಿದಾರರ ಮತ್ತು ಇತರ ಪ್ರಮುಖ ಸಾಕ್ಷಿದಾರರ ಹೇಳಿಕೆಯಿಂದ ಸಾಭೀತಾಗಿರುತ್ತದೆ ಹಾಗೂ `2000/– ಲಂಚದ ಹಣ ಪಡೆದಿರುವುದು ರಸಾಯನಿಕ ಪರೀಕ್ಷಾ ವರದಿಯಿಂದ ಸಾಭೀತಾಗಿರುತ್ತದೆ. ಆದ್ದರಿಂದ, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 7 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ರೀತ್ಯ ಎಸಗಿರುವ ಅಪರಾಧಕ್ಕೆ ಸದರಿ ಕಾಯ್ದೆಯ ಕಲಂ 19(1)(ಬಿ)ರ ರೀತ್ಯ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ಈ ಮುಂದಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 163 ಪಿಪಿಇ 2013, ಬೆಂಗಳೂರು, ದಿನಾಂಕ: 20ನೇ ಮೇ 2013**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಗಳ ಹಿನ್ನಲೆಯಲ್ಲಿ, ಆರೋಪಿತ ಅಧಿಕಾರಿಯಾದ ಶ್ರೀ ಹೆಚ್.ಎಂ.ರಘುಕುಮಾರ್, ಸರ್ಕಾರಿ ಅಭಿಯೋಜಕರು ಹಾಲಿ ಅಮಾನತ್ತಿನಲ್ಲಿರುವರು, ಈ ಹಿಂದೆ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ(ಪ್ರಭಾರ) ಇವರ ವಿರುದ್ಧ ಲೋಕಾಯುಕ್ತ ಠಾಣೆಯಲ್ಲಿ ದಾಖಲಿಸಿರುವ ಸಂ:06/2012ರ ಪ್ರಕರಣದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ

ಓದಲಾದ 13(2)ರ ರೀತ್ಯ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸದರಿ ಕಾಯ್ದೆಯ ಕಲಂ 19(1)(ಬಿ)ರನ್ವಯ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರಿಗೆ ಈ ಆದೇಶದ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ, ಕರ್ನಾಟಕ ಸರ್ಕಾರದ(ವ್ಯವಹಾರ) ನಿರ್ವಹಣೆ ನಿಯಮಾವಳಿ–1977ರ ನಿಯಮ 19(1)ರನ್ವಯ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 20–05–2013 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು – ಬಿ)

**PR.653**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ನರಸಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ:ಒಇ 01 ಪಿಪಿಇ 2000, ದಿನಾಂಕ:27.12.2003,

2. ವಿಚಾರಣಾಧಿಕಾರಿಯ ಇಲಾಖಾ ವಿಚಾರಣಾ ವರದಿಯ ದಿನಾಂಕ:07.04.2005

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಶ್ರೀ ಎಂ.ನರಸಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು ಇವರು ಈ ಹಿಂದೆ ಚಿಕ್ಕಮಗಳೂರಿನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಅಧಿಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ:15.10.1999ರಂದು ಬೆರಳಚ್ಚುಗಾರ–ವ–ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎಸ್.ಬಿ.ನಟಶೇಖರ್ ಇವರನ್ನು ಹೀನಾಯವಾಗಿ ಅವಾಚ್ಯ ಶಬ್ಧಗಳಿಂದ ಬೈದು, ಹೊಡೆಯಲು ಪ್ರಯತ್ನಿಸಿದ್ದರ ಬಗ್ಗೆ, ದಿನಾಂಕ:13.07.2000 ರಂದು ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಚನ್ನಮಲ್ಲಪ್ಪ ಇವರನ್ನೂ ಕೂಡ ಅವಾಚ್ಯ ಶಬ್ಧಗಳಿಂದ ಬೈದು, ಹೊಡೆಯಲು ಪ್ರಯತ್ನಿಸಿದ್ದರ ಬಗ್ಗೆ, ಅಲ್ಲಿಯ ಸಿಬ್ಬಂದಿ ವರ್ಗದವರಿಗೆ ಅವಾಚ್ಯ ಶಬ್ಧಗಳಿಂದ ಬೈದು, ಹೊಡೆಯಲು ಪ್ರಯತ್ನಿಸಿದ್ದರ ಬಗ್ಗೆ ಹಾಗೂ ಓರ್ವ ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಯಾಗಿ ಕಛೇರಿಯ ಸಿಬ್ಬಂದಿಯವರೊಂದಿಗೆ ಸೌಜನ್ಯ ರೀತಿಯಿಂದ ನಡೆದುಕೊಳ್ಳದೇ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಕಛೇರಿಯ ಸಿಬ್ಬಂದಿಯೊಂದಿಗೆ ಅನುಚಿತವಾಗಿ ಹಾಗೂ ಅಸಭ್ಯ ರೀತಿಯಲ್ಲಿ ವರ್ತಿಸಿ, ಸರ್ಕಾರಿ ನೌಕರರಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ದುರ್ನಡತೆಯೆಸಗಿದ ಬಗ್ಗೆ ಶಿಸ್ತು ಕ್ರಮವಹಿಸಲು 1957ರ ಕೆಸಿಎಸ್(ಸಿಸಿಎ) ನಿಯಮಗಳ ನಿಯಮ11ರ ಉಪನಿಯಮ (2) ಮತ್ತು 11–ಎ ರನ್ವಯ ಇಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ವಿ.ಕಣವಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮತ್ತು ಮುಖ್ಯ ಕಾನೂನು ಸಲಹೆಗಾರರು, ನಂ:1806, 8ನೇ ಮುಖ್ಯ ರಸ್ತೆ, ಜುಡಿಷಿಯಲ್ ಆಫೀಸರ್ಸ್ ಲೇ ಔಟ್, ಜಿ.ಕೆ.ವಿ.ಕೆ ಅಂಚೆ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಪ್ರಕರಣದ ದಾಖಲೆಗಳನ್ನು ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಸದರಿ ನಿಯಮದ ಉಪನಿಯಮ(5)(ಸಿ)ರ ಅನ್ವಯ ಶ್ರೀ ಎ.ಎ.ಮುಲ್ಲಾ, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ , ಶ್ರೀ ಎಂ.ನರಸಪ್ಪರವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ವಿಚಾರಣಾಧಿಕಾರಿಯವರು ದಿನಾಂಕ:07.04.2005ರಲ್ಲಿ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿ ಆರೋಪಿತ ಅಧಿಕಾರಿಯವರ ಮೇಲಿನ ದೋಷಾರೋಪಗಳು ಸಾಬೀತಾಗಿದೆ ಎಂದು ಅಭಿಪ್ರಾಯಿಸುತ್ತಾ, ಆರೋಪ (1) ರಿಂದ (4)ನ್ನು 'ಸ' ಕಾರಾತ್ಮಕವೆಂದು ವರದಿಸಿರುತ್ತಾರೆ.

ಶ್ರೀ ಎಂ.ನರಸಪ್ಪ ಇವರು ಪ್ರಸ್ತುತ ಸರ್ಕಾರಿ ಸೇವೆಯಿಂದ ನಿವೃತ್ತರಾಗಿರುತ್ತಾರೆ. ಸೇವಾ ಅವಧಿಯಲ್ಲಿ ಅವರು ಎಸಗಿರುವ ದುರ್ನಡತೆ ಸಾಬೀತಾಗಿದ್ದು, ಅವರ ದುರ್ನಡತೆಯಿಂದಾಗಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂಬುದನ್ನು ಅವಲೋಕಿಸಿ, ಸದರಿಯವರನ್ನು ವಿಚಾರಣೆಯಿಂದ ಮುಕ್ತಗೊಳಿಸಲು ತೀರ್ಮಾನಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 480 ಪಿಪಿಇ 2012, ಬೆಂಗಳೂರು, ದಿನಾಂಕ: 25ನೇ ಮೇ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎಂ.ನರಸಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು ಇವರನ್ನು ಇಲಾಖಾ ವಿಚಾರಣೆಯಿಂದ ಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು – ಬಿ)

**PR.652**

## ಒಳಾಡಳಿತ ಸಚಿವಾಲಯ

**ವಿಷಯ:** ನಕಲಿ ಛಾಪಾಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯವರನ್ನು ಬದಲಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ 23–01–2004, 07–01–2005& 10–02–2005.

2) ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ 11–12–2006.

3) ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ 13–05–2009.

4) ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ 09–08–2010.

5) ಸರ್ಕಾರದ ಆದೇಶ ಸಂಖ್ಯೆ. ಒಇ 23 ಪೊಸಿಪ 2004 ದಿನಾಂಕ 05–09–2011.

6) ಶ್ರೀ ಕೆ.ಶಿವರಾಂ (ನಿ) ಜಿಲ್ಲಾ ನ್ಯಾಯಾಧೀಶರ ಮನವಿ ದಿನಾಂಕ 18–11–2011.

7) ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(5)25/2003–04 ದಿನಾಂಕ 27–12–2011.

8) ಸರ್ಕಾರದ ಆದೇಶ ಸಂಖ್ಯೆ. ಒಇ 23 ಪೊಸಿಪ 2004 ದಿನಾಂಕ 19–01–2012.

9) ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(5)29/2010–11 ದಿನಾಂಕ 12–09–2012.

10) ಸರ್ಕಾರದ ಆದೇಶ ಸಂಖ್ಯೆ ಒಇ 23 ಪೊಸಿಪ 2004, ದಿನಾಂಕ 27.9.2012.

11) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಎಟಿಸಿ ಮತ್ತು ವಿಚಾರಣಾಧಿಕಾರಿಯವರ ಪತ್ರ ಸಂಖ್ಯೆ ಐಜಿಪಿ/ಎಟಿಸಿ/ಐಎಸ್‌ಡಿ/40/2012–13, ದಿನಾಂಕ 02.04.2013.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶಗಳಲ್ಲಿ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965ರ ನಿಯಮ 6 ಮತ್ತು 8ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ನೇಮಕಾತಿ ಮತ್ತು ತರಬೇತಿ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ತದನಂತರ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ಆದೇಶವನ್ನು ಭಾಗಶ: ಮಾರ್ಪಡಿಸಿ ಶ್ರೀ ಎಸ್.ಟಿ.ರಮೇಶ್, ಐಪಿಎಸ್, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಕೋರಿಕೆಯಂತೆ ಶ್ರೀ ಬಿ.ದಯಾನಂದ, ಐಪಿಎಸ್, ಪೊಲೀಸ್ ಉಪ ಮಹಾ ನಿರೀಕ್ಷಕರು, ಅಗ್ನಿಶಾಮಕ ಸೇವೆ, ಬೆಂಗಳೂರು ರವರನ್ನು ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಪ್ರಕರಣದ ಜಂಟಿ ಇಲಾಖೆ ವಿಚಾರಣಾಧಿಕಾರಿ ಶ್ರೀ ಎಸ್.ಟಿ.ರಮೇಶ್, ಐಪಿಎಸ್, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಬದಲಿಗೆ ಶ್ರೀ ಕೆ.ರಾಮಕೃಷ್ಣ ಭಟ್ (ನಿವೃತ್ತ) ನ್ಯಾಯಾಧೀಶರನ್ನು ಬದಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ.ರಾಮಕೃಷ್ಣ ಭಟ್ (ನಿವೃತ್ತ) ನ್ಯಾಯಾಧೀಶರ ಕೋರಿಕೆಯಂತೆ ಅವರನ್ನು ಬದಲಾಯಿಸಿ,ಶ್ರೀ ಶಿವರಾಮ್ ಕೆ (ನಿವೃತ್ತ) ಜಿಲ್ಲಾ ನ್ಯಾಯಾಧೀಶರನ್ನು ಬದಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಬಿ.ದಯಾನಂದ, ಐಪಿಎಸ್ ರವರು ತಮ್ಮ ಮನವಿಯಲ್ಲಿ ಇದೊಂದು ಜಟಿಲವಾದ ಇಲಾಖಾ ವಿಚಾರಣೆ ಆಗಿದ್ದು ಪ್ರಕರಣದಲ್ಲಿ 65ಕ್ಕೂ ಹೆಚ್ಚು ಸಾಕ್ಷಿದಾರರ ವಿಚಾರಣೆ ದೈನಂದಿನವಾಗಿ ಆಗಬೇಕಾಗಿದ್ದು ಇದು ಪೂರ್ಣಗೊಳಿಸಲು ಸಾಕಷ್ಟು ಸಮಯ ತೆಗೆದುಕೊಳ್ಳುವ ಸಂಭವವಿದ್ದು ರಾಜ್ಯ ಗುಪ್ತವಾರ್ತೆಯಲ್ಲಿ ತಮಗೆ ಕೆಲಸದ ಒತ್ತಡ ಇರುವುದರಿಂದ ಸದರಿ ಇಲಾಖೆ ವಿಚಾರಣೆಯನ್ನು ನಡೆಸುವುದು ಕಷ್ಟಕರವಾಗಿರುವುದರಿಂದ ಬೇರೊಬ್ಬ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿಕೊಳ್ಳಲು ಕೋರಿದ್ದರಿಂದ ಶ್ರೀ ಬಿ.ದಯಾನಂದ್, ಐಪಿಎಸ್, ಡಿ.ಐ.ಜಿ.ಪಿ, ಅಗ್ನಿ ಶಾಮಕ ಸೇವೆ, ಬೆಂಗಳೂರು ರವರ ಬದಲಿಗೆ ಎ.ಐ.ಜಿ.ಪಿ (ಸಾಮಾನ್ಯ) ಪ್ರಧಾನ ಕಛೇರಿ, ಬೆಂಗಳೂರು ರವರನ್ನು ಬದಲಿ ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು,

ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೆ.ಶಿವರಾಮ್ (ನಿವೃತ್ತ) ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರನ್ನು ರಾಮನಗರ ಜಿಲ್ಲಾಧಿಕಾರಿಗಳು ಕಾನೂನು ಸಲಹೆಗಾರರನ್ನಾಗಿ ನೇಮಕ ಮಾಡುವ ಸಾಧ್ಯತೆ ಇರುವುದರಿಂದ ಪ್ರಕರಣದಲ್ಲಿ ಇವರು ವಿಚಾರಣಾಧಿಕಾರಿಯಾಗಿ ಮುಂದುವರೆಯಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಬದಲಿ ವಿಚಾರಣಾಧಿಕಾರಿಯನ್ನು ನೇಮಕ ಮಾಡುವಂತೆ ಕೋರಿರುತ್ತಾರೆ.

ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ನಕಲಿ ಛಾಪಾ ಕಾಗದ ಹಗರಣಗಳಿಗೆ ಸಂಬಂಧಿಸಿದಂತೆ ಇರುವ ಜಂಟಿ ಇಲಾಖಾ ವಿಚಾರಣೆಯನ್ನು ಎ.ಡಿ.ಜಿ.ಪಿ, ಆಂತರಿಕ ಭದ್ರತೆ ವಿಭಾಗ, ಬೆಂಗಳೂರು ರವರನ್ನು ಬದಲಿ ವಿಚಾರಣಾಧಿಕಾರಿಯಾಗಿ ಹಾಗೂ ಐ.ಜಿ.ಪಿ, ಎ.ಟಿ.ಸಿ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರು ಕೋರಿರುತ್ತಾರೆ. ಅದರಂತೆ ಮೇಲೆ (8)ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ 09–08–2010ನ್ನು ಮಾರ್ಪಡಿಸಿ ಶ್ರೀ ಕೆ.ಶಿವರಾಮ್ (ನಿವೃತ್ತ) ಜಿಲ್ಲಾ ನ್ಯಾಯಾಧೀಶರ ಬದಲಿಗೆ ಎ.ಡಿ.ಜಿ.ಪಿ, ಆಂತರಿಕ ಭದ್ರತೆ ವಿಭಾಗ, ಬೆಂಗಳೂರು ರವರನ್ನು ಬದಲಿ ವಿಚಾರಣಾಧಿಕಾರಿಯನ್ನಾಗಿ ಹಾಗೂ ದಿನಾಂಕ 05–09–2011ರ ಆದೇಶವನ್ನು ಮಾರ್ಪಡಿಸಿ ಸಹಾಯಕ ಐ.ಜಿ.ಪಿ (ಸಾಮಾನ್ಯ), ಪ್ರಧಾನ ಕಛೇರಿ, ಬೆಂಗಳೂರು ರವರ ಬದಲಿಗೆ ಐ.ಜಿ.ಪಿ, ಎ.ಟಿ.ಸಿ, ಬೆಂಗಳೂರು ನಗರ ರವರನ್ನು ಬದಲಿ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ (9)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಯವರಾದ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಆಂತರಿಕ ಭದ್ರತಾ ವಿಭಾಗ, ಬೆಂಗಳೂರು ರವರು ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ.ಡಿಪಿಎಆರ್/79/ಎಸ್‌ಪಿಪಿ/12 ದಿನಾಂಕ 29–08–2012ರಲ್ಲಿ ಅವರಿಗೆ ದಿನಾಂಕ 01–09–2012 ರಿಂದ 30–04–2013ರ ವರೆಗೆ ಅಸಾಧಾರಣ ರಜೆ (ಇಒಎಲ್) ಮಂಜೂರಾಗಿರುವುದರಿಂದ, ಸದರಿ ಜಂಟಿ ಇಲಾಖಾ ವಿಚಾರಣೆಯಲ್ಲಿ ಬೇರೆಯವರನ್ನು ವಿಚಾರಣಾಧಿಕಾರಿಯಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ.

ಮೇಲೆ (10)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಜಂಟಿ ಇಲಾಖೆ ವಿಚಾರಣೆಯನ್ನು ಎ.ಡಿ.ಜಿ.ಪಿ, ಆಂತರಿಕ ಭದ್ರತಾ ವಿಭಾಗ, ಬೆಂಗಳೂರು ರವರ ಬದಲಿಗೆ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಎಟಿಸಿ, ಬೆಂಗಳೂರುರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಎ.ಟಿ.ಸಿ, ಬೆಂಗಳೂರು ರವರ ಬದಲಿಗೆ ಡಿ.ಐ.ಜಿ.ಪಿ, ಐಎಸ್‌ಡಿ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ(11)ರಲ್ಲಿ ಓದಲಾದ ಪತ್ರದಲ್ಲಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಇವರು ನಕಲಿ ಛಾಪಾ ಕಾಗದ ಹಗರಣಕ್ಕೆ ಸಂಬಂಧಿಸಿದಂತೆ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧ ನಡೆಸುತ್ತಿರುವ ಜಂಟಿ ಇಲಾಖಾ ವಿಚಾರಣೆಯ ಬಗ್ಗೆ ಪ್ರಗತಿಯ ವರದಿಯನ್ನು ಒದಗಿಸಿರುತ್ತಾರೆ. ಆದ್ದರಿಂದ, ಶ್ರೀ ಭಾಸ್ಕರ್ ರಾವ್, ಐ.ಜಿ.ಪಿ, ಎ.ಟಿ.ಸಿ ಇವರು ವಿಚಾರಣೆಯನ್ನು ತ್ವರಿತಗತಿಯಲ್ಲಿ ಮುಂದುವರೆಸುತ್ತಿರುವುದರಿಂದ ವಿಚಾರಣಾಧಿಕಾರಿಯ ಹೆಸರನ್ನು ನಮೂದಿಸಿ ವಿಚಾರಣಾಧಿಕಾರಿಯನ್ನು ಮತ್ತು ಮಂಡನಾಧಿಕಾರಿಯನ್ನು ನೇಮಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ಬೆಂಗಳೂರು, ದಿನಾಂಕ:20-05-2013.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರದ ಆದೇಶ ಸಂಖ್ಯೆ.ಒಇ 23 ಪೊಸಿಪ 2004 ದಿನಾಂಕ 27-09-2012ನ್ನು ಮಾರ್ಪಡಿಸಿ ಸದರಿ ಜಂಟಿ ಇಲಾಖೆ ವಿಚಾರಣೆಯನ್ನು ನಡೆಸಲು ಶ್ರೀ ಭಾಸ್ಕರ್‌ರಾವ್, ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಎ.ಟಿ.ಸಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಹೇಮಂತ್ ನಿಂಬಾಳ್ಕರ್, ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಎಟಿಸಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ದಿನಾಂಕ 10-02-2005ರ ಆದೇಶದಲ್ಲಿನ ಉಳಿದ ಇತರೆ ಆದೇಶಗಳು ಯಥಾವತ್ತಾಗಿ ಮುಂದುವರೆಯುತ್ತದೆ. ವಿಚಾರಣೆಯನ್ನು ಮೂರು ತಿಂಗಳ ಒಳಗಾಗಿ ಪೂರ್ಣಗೊಳಿಸಿ ವರದಿ ಮಾಡುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ).

**PR.672**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವೈ.ಹೆಚ್.ಖಾನ್, ಡಿವೈ.ಎಸ್.ಪಿ(ಸಶಸ್ತ್ರ), ಡಿಎಆರ್, ರಾಯಚೂರು, ಶ್ರೀ ಡಿ.ಪ್ರಕಾಶ್, ಆರ್‌ಎಸ್.ಐ, ಶ್ರೀ ಸಿದ್ಧಯ್ಯ, ಆರ್.ಎಸ್.ಐ, ಶ್ರೀ ಮಹೇಶ್, ಎ.ಪಿ.ಸಿ-205 ರವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಚೇರಿ ಪತ್ರ ಸಂಖ್ಯೆ: ಸಿಬಿ(5):5:2008-09 ದಿನಾಂಕ 03-10-2012.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ವೈ.ಹೆಚ್.ಖಾನ್, ಡಿವೈ.ಎಸ್.ಪಿ(ಸಶಸ್ತ್ರ) ಡಿಎಆರ್, ರಾಯಚೂರು, ಶ್ರೀ ಡಿ.ಪ್ರಕಾಶ್, ಆರ್‌ಎಸ್.ಐ, ಶ್ರೀ ಸಿದ್ಧಯ್ಯ, ಆರ್.ಎಸ್.ಐ, ಶ್ರೀ ಮಹೇಶ್, ಎ.ಪಿ.ಸಿ-205 ಆದ ನೀವುಗಳು ದಿನಾಂಕ 21-10-2008ರಂದು ಶ್ರೀ ರಾಜೇಂದ್ರ ರೆಡ್ಡಿ, ಎ.ಪಿ.ಸಿ-181, ಡಿ.ಎ.ಆರ್, ರಾಯಚೂರು ರವರೊಂದಿಗೆ ಪೊಲೀಸ್ ವಾಹನ ಸಂಖ್ಯೆ: ಕೆಎ-36/ಜಿ-5065 ಜೀಪನ್ನು ಮೇಲಧಿಕಾರಿಗಳ ಅನುಮತಿ ಪಡೆಯದೆ, ಕೇಂದ್ರಸ್ಥಾನವನ್ನು ಬಿಟ್ಟು, ರಾಯಚೂರಿನಿಂದ ಹೊಸಪೇಟೆಗೆ ಅನಧಿಕೃತವಾಗಿ ತೆಗೆದುಕೊಂಡು ಹೋಗಿದ್ದು, ದಿನಾಂಕ 21-10-2008ರ ರಾತ್ರಿ 7.00 ಗಂಟೆಗೆ ಪೊಲೀಸ್ ವಾಹನ ಸಂಖ್ಯೆ: ಕೆಎ-36/ಜಿ/5065ರಲ್ಲಿ ಹೊಸಪೇಟೆಯಿಂದ ರಾಯಚೂರಿಗೆ ಮರಳಿ ಬರುವಾಗ, ವಾಹನ ಚಾಲಕ ಎ.ಪಿ.ಸಿ.ರಾಜೇಂದ್ರ ರೆಡ್ಡಿ ರವರು ಮಾನವಿ ಮುಖ್ಯ ರಸ್ತೆಯ ಬೋತ್ನಾಳ್ ಹತ್ತಿರ ಬ್ರಿಡ್ಜ್ ಸಂಖ್ಯೆ.54/3ರ ಸಮೀಪ ಒಂದು ಉಸುಕು ತುಂಬಿದ ಟ್ರಾಕ್ಟರ್ ಟ್ರಾಲಿಗೆ ಹಿಂದಿನಿಂದ ಡಿಕ್ಕಿ ಹೊಡೆದು ಪೊಲಿಸ್ ವಾಹನಕ್ಕೆ ಭಾರಿ ಅಪಘಾತ ಆಗಿ ರೂ.1,20,000/-ಗಳಷ್ಟು ಹಣ ಸರ್ಕಾರಕ್ಕೆ ನಷ್ಟವುಂಟಾಗಲು ಕಾರಣರಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ಅಧಿಕಾರಿಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮ 1965/89ರ ನಿಯಮ 6 ಉಪ ನಿಯಮ 2 ಮತ್ತು 8ರ ಅನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸುವಂತೆ ಡಿಜಿಪಿ ರವರು ಕೋರಿರುತ್ತಾರೆ. ಸದರಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಅಡಿಷನಲ್ ಎಸ್.ಪಿ, ಬಳ್ಳಾರಿ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಸಹ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 486 ಪೊಸಿಪ 2012 ಬೆಂಗಳೂರು, ದಿನಾಂಕ:07-02-2013.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಶ್ರೀ ವೈ.ಹೆಚ್.ಖಾನ್, ಡಿವೈ.ಎಸ್.ಪಿ(ಸಶಸ್ತ್ರ) ಡಿಎಆರ್, ರಾಯಚೂರು, ಶ್ರೀ ಡಿ.ಪ್ರಕಾಶ್, ಆರ್‌ಎಸ್.ಐ, ಶ್ರೀ ಸಿದ್ಧಯ್ಯ, ಆರ್.ಎಸ್.ಐ, ಶ್ರೀ ಮಹೇಶ್, ಎ.ಪಿ.ಸಿ-205ರವರುಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮ 1965/89ರ ನಿಯಮ 6 ಉಪ ನಿಯಮ 2 ಮತ್ತು 8ರ ಅನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಅಡಿಷನಲ್ ಎಸ್.ಪಿ, ಬಳ್ಳಾರಿ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಈ ಸಂಬಂಧ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಹೊರಡಿಸಲಾಗಿದೆ. ವಿಚಾರಣೆಯನ್ನು ನಿಯಮಾನುಸಾರ ನಡೆಸಿ ಮೂರು ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ).

**PR.619**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯ ಮತ್ತು ಜಿಲ್ಲಾ ಮಟ್ಟದ ಲಸಿಕಾ ಕಾರ್ಯಪಡೆ (Task Force) ಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯದ ಜಂಟಿ ಕಾರ್ಯದರ್ಶಿ (ಆರ್.ಸಿ.ಹೆಚ್) ಇವರ ಪತ್ರ ಸಂಖ್ಯೆ: T13011/38/2011-CC&V, ದಿನಾಂಕ: 14–9–2012.
2. ಯೋಜನಾ ನಿರ್ದೇಶಕರು (ಆರ್.ಸಿ. ಹೆಚ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಏಕ ಕಡತ ಸಂಖ್ಯೆ: NRHM/DD(IMM)26/ 2012–13.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯದ ಜಂಟಿ ಕಾರ್ಯದರ್ಶಿ (ಆರ್.ಸಿ.ಹೆಚ್) ಇವರು ರಾಷ್ಟ್ರೀಯ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ (Universal Immunization Programme)ದಡಿಯಲ್ಲಿ Coverage Evaluation Survey ಪ್ರಕಾರ ಭಾರತದಲ್ಲಿ ಪೂರ್ಣ ಪ್ರಮಾಣದ ಲಸಿಕೆ ಪಡೆದಿರುವ ಮಕ್ಕಳು ಶೇಕಡ 61 ರಷ್ಟು ಮಾತ್ರ ಇದೆಯೆಂದು ತಿಳಿಸುತ್ತಾ, ಒಟ್ಟಾರೆ ದೇಶದಲ್ಲಿ ಲಸಿಕೆ ಪಡೆದಿರುವ ಮಕ್ಕಳ ಪ್ರಮಾಣವು ಶೇಕಡ 50 ಕ್ಕಿಂತ ಕಡಿಮೆ ಪ್ರಗತಿ ಸಾಧಿಸಿರುವ ಹಲವು ಜಿಲ್ಲೆಗಳಿದ್ದು, ಲಸಿಕೆಯಿಂದ ತಡೆಗಟ್ಟಬಹುದಾದ ಕಾಯಿಲೆಯಿಂದ ಮಕ್ಕಳ ರಕ್ಷಣೆಗೆ ಒತ್ತು ನೀಡಬೇಕಾಗಿರುವುದರಿಂದ ಭಾರತ ಸರ್ಕಾರವು 2012–13ನೇ ಸಾಲಿನ ವರ್ಷವನ್ನು "ನಿರಂತರ ಲಸಿಕಾ ಕಾರ್ಯಕ್ರಮಗಳ ತೀವ್ರಗೊಳಿಸುವಿಕೆ ವರ್ಷ" (Year of Intensification of Routine Immunization ) ಎಂದು ಘೋಷಿಸಿದ್ದು, ಈ ಸಂಬಂಧವಾಗಿ ರಾಜ್ಯ ಮತ್ತು ಜಿಲ್ಲಾ ಮಟ್ಟದಲ್ಲಿ ನಡೆಯುತ್ತಿರುವ ನಿರಂತರ ಲಸಿಕಾ ಕಾರ್ಯಕ್ರಮದ ಪ್ರಸ್ತುತ ಹಂತವನ್ನು ಪುನರಾವಲೋಕಿಸಲು ಹಾಗೂ ಲಸಿಕೆಯಿಂದ ವಂಚಿತರಾಗಿರುವವರನ್ನು ಗುರುತಿಸಿ, ನಿರಂತರ ಲಸಿಕಾ ಕಾರ್ಯಕ್ರಮದ ಪ್ರಮಾಣವನ್ನು ಉತ್ತಮಪಡಿಸುವ ಕುರಿತು ಪ್ರಸ್ತಾಪಿಸಿರುತ್ತಾರೆ. ಹಾಗೂ ರಾಷ್ಟ್ರಾದ್ಯಂತ ಪೋಲಿಯೋ ನಿರ್ಮೂಲನೆ ಮಾಡಲು ಕೈಗೊಂಡಿರುವ ಲಸಿಕಾ ಕಾರ್ಯಕ್ರಮದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಗಳ/ಸಿಬ್ಬಂದಿಯವರ ಮೇಲ್ವಿಚಾರಣೆ ಮತ್ತು ಪರಿಶ್ರಮಗಳಿಂದ ಯಶಸ್ವಿಗೊಳಿಸಲು ಹಾಗೂ ಆ ಮೂಲಕ ನಿರಂತರ ಲಸಿಕಾ ಕಾರ್ಯಕ್ರಮದ ಪ್ರಗತಿಯನ್ನು ಪರಿಶೀಲಿಸಲು ರಾಜ್ಯ ಮತ್ತು ಜಿಲ್ಲಾ ಮಟ್ಟದ ಕಾರ್ಯಪಡೆ (Task Force) ಗಳನ್ನು ರಚಿಸುವಂತೆ ತಿಳಿಸಿರುತ್ತಾರೆ

ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಯೋಜನಾ ನಿರ್ದೇಶಕರು (ಆರ್.ಸಿ. ಹೆಚ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು ಇವರ ಏಕ ಕಡತದಲ್ಲಿನ ಪ್ರಸ್ತಾವನೆಯಲ್ಲಿ ಭಾರತ ಸರ್ಕಾರವು ಸೂಚಿಸಿರುವಂತೆ ನಿರಂತರ ಲಸಿಕಾ ಕಾರ್ಯಕ್ರಮದ ಪ್ರಗತಿಯನ್ನು ಪರಿಶೀಲಿಸಿ ಪುನಾರಾವಾಲೋಕಿಸಲು ಹಾಗೂ ಲಸಿಕೆಯಿಂದ ವಂಚಿತರಾಗಿರುವವರನ್ನು ಗುರುತಿಸಿ ನಿರಂತರ ಲಸಿಕಾ ಕಾರ್ಯಕ್ರಮವನ್ನು ಉತ್ತಮಪಡಿಸಲು ರಾಜ್ಯ ಹಾಗೂ ಜಿಲ್ಲಾ ಮಟ್ಟದ ಕಾರ್ಯಪಡೆಯನ್ನು ರಚಿಸುವ ಕುರಿತು ಪ್ರಸ್ತಾಪಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ರಾಜ್ಯ ಹಾಗೂ ಜಿಲ್ಲಾ ಮಟ್ಟದ ಕಾರ್ಯಪಡೆಗಳನ್ನು ರಚಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 69 ಎಫ್‌ಪಿಆರ್ 2013, ಬೆಂಗಳೂರು, ದಿನಾಂಕ: 31–05–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಷ್ಟ್ರೀಯ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ (Univeral Immunization Programme) ದಡಿಯಲ್ಲಿ ನಿರಂತರ ಲಸಿಕಾ ಕಾರ್ಯಕ್ರಮ (Routing Immunization Programme)ದ ಪ್ರಗತಿಯನ್ನು ಪುನರಾವಲೋಕಿಸಿ ಸಮಸ್ಯಗಳನ್ನು ಗುರುತಿಸಿ ಕಾರ್ಯಕ್ರಮವನ್ನು ಉತ್ತಮ ಪಡಿಸಲು ಹಾಗೂ ಬಲಪಡಿಸಲು ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸರಿಯಾದ ಕ್ರಮಗಳನ್ನು ಕೈಗೊಳ್ಳಲು ರಾಜ್ಯ ಮತ್ತು ಜಿಲ್ಲಾ ಮಟ್ಟದ ಲಸಿಕಾ ಕಾರ್ಯಪಡೆ (Task Force)ಗಳನ್ನು ಸರ್ಕಾರವು ಈ ಕೆಳಕಂಡಂತೆ ರಚಿಸಿ ಆದೇಶಿಸಿದೆ.

I. **ರಾಜ್ಯ ಮಟ್ಟದ ಲಸಿಕಾ ಕಾರ್ಯಪಡೆ (State Task Force for Immunization):–**

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು | ಅಧ್ಯಕ್ಷರು |
| 2. | ಅಭಿಯಾನ ನಿರ್ದೇಶಕರು,<br>ರಾಷ್ಟ್ರೀಯ ಗ್ರಾಮೀಣ .ಆರೋಗ್ಯ .ಅಭಿಯಾನ ಬೆಂಗಳೂರು.. | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿ,<br>ಗ್ರಾಮೀಣಾಭಿವೃದ್ಧಿ ಮತ್ತು .ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ ಬೆಂಗಳೂರು. | ಸದಸ್ಯರು |
| 4 | ಸರ್ಕಾರದ ಕಾರ್ಯದರ್ಶಿ<br>ನಗರಾಭಿವೃದ್ಧಿ ಇಲಾಖೆ, ವಿಕಾಸ ಸೌಧ ಬೆಂಗಳೂರು. | ಸದಸ್ಯರು |
| 5. | ಸರ್ಕಾರದ ಕಾರ್ಯದರ್ಶಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು | ಸದಸ್ಯರು |
| 6 | ಹೆಚ್ಚುವರಿ ಆಯುಕ್ತರು,<br>ಬೃಹತ್ ಬೆಂಗಳೂರು ಮಹಾ ನಗರ ಪಾಲಿಕೆ, ಬೆಂಗಳೂರು | ಸದಸ್ಯರು |
| 7 | ಮುಖ್ಯ ಆರೋಗ್ಯ ಅಧಿಕಾರಿ,<br>ಬೃಹತ್ ಬೆಂಗಳೂರು ಮಹಾ ನಗರ ಪಾಲಿಕೆ, ಬೆಂಗಳೂರು | ಸದಸ್ಯರು |

| | | |
|---|---|---|
| 8 | ನಿರ್ದೇಶಕರು,<br>ಇಂದಿರಾಗಾಂದಿ ಮಕ್ಕಳ ಆರೋಗ್ಯ ಮಹಾ ವಿದ್ಯಾಲಯ, ಬೆಂಗಳೂರು. | ಸದಸ್ಯರು |
| 9 | ಮಕ್ಕಳ ವಿಭಾಗದ ಮುಖ್ಯಸ್ಥರು,<br>ವಾಣಿವಿಲಾಸ ಮಕ್ಕಳ ಆಸ್ಪತ್ರೆ, ಬೆಂಗಳೂರು ವೈದ್ಯಕೀಯ ಮಹಾ ವಿದ್ಯಾಲಯ ಮತ್ತು<br>ಸಂಶೋಧನಾ ಸಂಸ್ಥೆ, ಬೆಂಗಳೂರು. | ಸದಸ್ಯರು |
| 10 | ಲಸಿಕಾ ಸಂಶೋಧಕ ಸಂಶೋಧನಾಧಿಕಾರಿ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು. | ಸದಸ್ಯರು |
| 11 | ಉಪ ನಿರ್ದೇಶಕರು(ಲಸಿಕೆ)<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು. | ಸದಸ್ಯರು |
| 12 | ಸಹ ನಿರ್ದೇಶಕರು(ಐ.ಇ.ಸಿ)<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು. | ಸದಸ್ಯರು |
| 13 | ಶೀತಲ ಸರಪಳಿ ಅಧಿಕಾರಿ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು. | ಸದಸ್ಯರು |
| 14 | ಕಾರ್ಯ ನಿರ್ವಾಹಕ ನಿರ್ದೇಶಕರು (ಕೆ.ಎಸ್.ಹೆಚ್.ಎಸ್.ಆರ್.ಸಿ)<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು. | ಸದಸ್ಯರು |
| 15 | ಎನ್.ಪಿ.ಎಸ್.ಪಿ. ವಿಶ್ವ ಆರೋಗ್ಯ ಸಂಸ್ಥೆ ಕ್ಷೇತ್ರ ಕಛೇರಿ, ಬೆಂಗಳೂರು ಪ್ರತಿನಿಧಿ,<br>ಸಾಂಕ್ರಮಿಕ ರೋಗಗಳ ಆಸ್ಪತ್ರೆ, 1ನೇ ಮಹಡಿ, ಸ್ವಾಮಿವಿವೇಕಾನಂದ ಮಾರ್ಗ,ಬೆಂಗಳೂರು. | ಸದಸ್ಯರು |
| 16 | ಯೂನಿಸೆಫ್ ಪ್ರತಿನಿಧಿ ,ಹೆಲ್ತ್ ಸೆಸ್ಪೆಷಲಿಸ್ಟ್ ಯುನಿಸೆಫ್ ರಿಜಸ್ಟರಡ್ ಆಫೀಸ್ ಹೈದರಾಬಾದ್, | ಸದಸ್ಯರು |
| 17 | ಅಧ್ಯಕ್ಷರು, ಮಕ್ಕಳ ತಜ್ಞರ ಸಂಘ, ಐ ಎಂ ಎ ಹೌಸ್, ಬೆಂಗಳೂರು | ಸದಸ್ಯರು |
| 18 | ಕರುಣಾ ಟ್ರಸ್ಟ್, ನಂ 686,16ನೇ ಮೈನ್, 4ನೇ ಟಿ ಬ್ಲಾಕ್ 39 ನೇಕ್ರಾಸ್<br>ಜಯನಗರ ಬೆಂಗಳೂರು–41 | ಸದಸ್ಯರು |
| 19 | ರೋಟರಿ ಪ್ಲಸ್ ಸಮಿತಿ, ಶರಾವತಿ ನರ್ಸಿಂಗ್ ಹೋಂ ಬಿ.ಹೆಚ್ ರಸ್ತೆ ಶಿವಮೊಗ್ಗ. | ಸದಸ್ಯರು |
| 20 | ಯೋಜನಾ ನಿರ್ದೇಶಕರು(ಆರ್.ಸಿ.ಹೆಚ್.)<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

**ರಾಜ್ಯ ಮಟ್ಟದ ಲಸಿಕಾ ಕಾರ್ಯಪಡೆಯ ಪರಿಶೀಲನಾಂಶಗಳು (Terms of Reference);-**

1. ಜಿಲ್ಲಾ ಮಟ್ಟದ ಲಸಿಕಾ ಕಾರ್ಯಪಡೆ(DTFI) ಯನ್ನು ಪ್ರತಿ ಜಿಲ್ಲೆಯಲ್ಲಿ ರಚಿಸಲಾಗಿದೆಯೇ ಎಂಬುದನ್ನು ಹಾಗೂ ಅಂತಹ ಕಾರ್ಯಪಡೆಗಳು ಕಾಲ ಕಾಲಕ್ಕೆ ಸಭೆ ನಡೆಸುತ್ತಿವೆಯೆ ಎಂದು ಪರಿಶೀಲಿಸುವುದು.
2. ನಿರಂತರ ಲಸಿಕಾ ಕಾರ್ಯಕ್ರಮದ ಸಮರ್ಪಕ ನಿರ್ವಹಣೆಯಲ್ಲಿ ಅಂಕಿ ಅಂಶಗಳ ಆಧಾರದ ಮೇಲೆ ಒಟ್ಟಾಗಿ ಸಾಧಿಸಿರುವ ಪ್ರಗತಿ (coverage data) (HMIS & MCTS) ಲಸಿಕೆಯಿಂದ ತಡೆಯಬಹುದಾದ ಖಾಯಿಲೆಗಳು (VPDs) ಇವುಗಳನ್ನು ತೀವ್ರವಾಗಿ ಪರಿಶೀಲಿಸುವುದು.
3. ಜಿಲ್ಲಾ ಮತ್ತು ಉಪ ವಿಭಾಗ ಮಟ್ಟದಲ್ಲಿ ಖಾಲಿ ಇರುವ ಹುದ್ದೆಗಳು, ಲಸಿಕೆಗಳ ವಿತರಣಾ ಸರಪಳಿಗಳು ಹಾಗೂ ಹೆಚ್ಚಿನ ಆದ್ಯತಾ ಜಿಲ್ಲೆಗಳಿಗೆ ಕೇಂದ್ರೀಕರಿಸಿ ತರಬೇತಿ ನೀಡುವ ಬಗ್ಗೆ ಪರಿಶೀಲಿಸುವುದು.
4. ನಿರಂತರ ಲಸಿಕಾ ಕಾರ್ಯಕ್ರಮದಲ್ಲಿ ಬೇಡಿಕೆ ಹೆಚ್ಚಿಸಲು ಸಮುದಾಯವನ್ನು ಪಾಲ್ಗೊಳ್ಳುವಂತೆ ಮಾಡುವುದಕ್ಕಾಗಿ ಮಾಹಿತಿ ನೀಡುವುದು ಹಾಗೂ ಅರಿವು ಮೂಡಿಸುವುದು. ಮತ್ತು ಪಸರಿಸುವುದು.(IEC) ಹಾಗೂ ಇದಕ್ಕಾಗಿ ರಾಜ್ಯ ಮತ್ತು ಜಿಲ್ಲಾ ಮಟ್ಟದ ಲಸಿಕಾ ಕಾರ್ಯಕ್ರಮಗಳನ್ನು ಪುನರಾವಲೋಕಿಸುವುದು.
5. ಲಸಿಕಾ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಹಣಕಾಸಿನ ನೆರವು ಒದಗಿಸಿಕೊಳ್ಳುವುದು ಹಾಗೇ ವೆಚ್ಚದ ಕೋಷ್ಠಕ (SOE) ಸಂಬಂದಿಸಿದ ವಿಷಯಗಳನ್ನು ಪರಿಶೀಲಿಸುವುದು.
6. ರಾಜ್ಯ ಮಟ್ಟದ ಉಸ್ತುವಾರಿ ಸಂಘಗಳಿಂದ ಪಡೆದ ಸ್ಥಾನಿಕ ವರದಿಗಳ (Field Report) ಆಧಾರದ ಮೇಲೆ DTFIS ಸ್ವೀಕರಿಸಿರುವ ಸಭಾ ನಡವಳಿಗಳ ಆಧಾರದ ಮೇಲೆ ಸೂಕ್ತ ಕ್ರಮ ಕೈಗೊಳ್ಳಲು ಜವಾಬ್ದಾರಿಗಳನ್ನು ಗುರುತಿಸಿ ನಿರ್ದಿಷ್ಟ/ಸೂಕ್ತ ಕಾರ್ಯಕ್ರಮಗಳ ಬಗ್ಗೆ ನಿರ್ಧರಿಸುವುದು.
7. ರಾಜ್ಯಾದ್ಯಂತ ನಿರಂತರ ಲಸಿಕಾ ಕಾರ್ಯಕ್ರಮವನ್ನು ಸುಧಾರಿಸಲು/ಉತ್ತಮ ಪಡಿಸಲು ಸೂಕ್ತ ಆರೋಗ್ಯೇತರ ಇಲಾಖೆಗಳನ್ನು ಒಳಗೊಳ್ಳುವಂತೆ ಮಾಡುವುದು ಹಾಗೂ ಆ ಇಲಾಖೆಗಳ ಸಹಕಾರ ಪಡೆಯುವುದು.
8. ಹಿಂದಿನ ಸಭೆಯಲ್ಲಿ ಕೈಗೊಂಡ ನಿರ್ಧಾರಗಳ ಮೇಲೆ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ಪರಿಶೀಲಿಸುವುದು.

**ಸೂಚನೆ: (Note):–**

- ರಾಜ್ಯ ಮಟ್ಟದ ಲಸಿಕಾ ಕಾರ್ಯಪಡೆಯು (STFI) ಪ್ರತಿ ತಿಂಗಳು ಸಭೆ ನಡೆಸುವುದು.
- ರಾಜ್ಯ ಮಟ್ಟದ ಲಸಿಕಾ ಕಾರ್ಯಪಡೆಯ ಸಭೆಗೆ ಸಂಬಂದಿಸಿದ ಕಾರ್ಯಸೂಚನೆ ತಯಾರಿಸಿ ಸಭಾ ಸೂಚನಾ ಪತ್ರದೊಂದಿಗೆ ಪರಿಚಲಿಸುವುದು.
- ಪ್ರತಿ ಸಬೆಯ ನಂತರ ಸಭಾ ನಡವಳಿಯನ್ನು ಹೆಚ್ಚುವರಿ ಕಾರ್ಯದರ್ಶಿ ಹಾಗೂ ಅಭಿಯಾನ ನಿರ್ದೇಶಕರು, ಎನ್.ಆರ್.ಹೆಚ್.ಎಂ. ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಭಾರತ ಸರ್ಕಾರ ಇವರಿಗೆ ಕಳುಹಿಸುವುದು.

**II. ಜಿಲ್ಲಾ ಮಟ್ಟದ ಲಸಿಕಾ ಕಾರ್ಯಪಡೆ: (District Task Force for Immunization):–**

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ನಿರಂತರ ಲಸಿಕಾ ಕಾರ್ಯಕ್ರಮದ ಪ್ರಗತಿಯನ್ನು ಪರಿಶೀಲನೆ ಮಾಡಿ ಸಮಸ್ಯೆಗಳನ್ನು ಗುರುತಿಸಿ ಕಾರ್ಯಕ್ರಮವನ್ನು ಉತ್ತಮಪಡಿಸಲು ಹಾಗೂ ಪ್ರಗತಿ ಸಾಧಿಸಲು ಆಯಾ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಅಧ್ಯಕ್ಷರು ಹಾಗೂ ಸದಸ್ಯರನ್ನೊಳಗೊಂಡ ಜಿಲ್ಲಾ ಮಟ್ಟದ ಕಾರ್ಯಪಡೆಯನ್ನು ಈ ಕೆಳಕಂಡಂತೆ ರಚಿಸಿದೆ;–

| | | |
|---|---|---|
| 1 | ಜಿಲ್ಲಾಧಿಕಾರಿ | ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿ | ಸದಸ್ಯರು |
| 3. | ಜಿಲ್ಲಾ ಲಸಿಕಾಧಿಕಾರಿ | ಸದಸ್ಯರು |
| 4. | ಜಿಲ್ಲಾ ನಗರಾಭಿವೃದ್ಧಿ ಅಧಿಕಾರಿ | ಸದಸ್ಯರು |
| 5. | ಜಿಲ್ಲಾ ಯೋಜನಾಧಿಕಾರಿ | ಸದಸ್ಯರು |
| 6 | ಜಿಲ್ಲಾ ವಾರ್ತಾಧಿಕಾರಿ | ಸದಸ್ಯರು |
| 7 | ಜಿಲ್ಲಾ ಶಿಕ್ಷಣಾಧಿಕಾರಿ | ಸದಸ್ಯರು |
| 8 | ಜಿಲ್ಲಾ ಕಣ್ಗಾವಲು ಅಧಿಕಾರಿ (ಐ,ಡಿ,ಎಸ್,ಪಿ) | ಸದಸ್ಯರು |
| 9 | ಜಿಲ್ಲಾ ಕಾರ್ಯಕ್ರಮ ವ್ಯವಸ್ಥಾಪಕರು (ಎನ್.ಆರ್.ಹೆಚ್.ಎಂ.) | ಸದಸ್ಯರು |
| 10 | ಜಿಲ್ಲಾ ಸರ್ವೇಕ್ಷಣಾಧಿಕಾರಿ (ಎನ್,ಪಿ,ಎಸ್,ಪಿ) | ಸದಸ್ಯರು |
| 11 | ಅಧ್ಯಕ್ಷರು, ನಗರ ಪಾಲಿಕೆ/ಮುನಿಸಿಪಾಲಿಟಿ/ಮಹಾನಗರಪಾಲಿಕೆ | ಸದಸ್ಯರು |
| 12 | ಅಧ್ಯಕ್ಷರು, ಭಾರತೀಯ ವೈದ್ಯ ಸಂಘ ಜಿಲ್ಲಾ ಶಾಖೆ. | ಸದಸ್ಯರು |
| 13 | ಅಧ್ಯಕ್ಷರು, ಬಾರತೀಯ ಮಕ್ಕಳ ತಜ್ಞರ ಸಂಘ, ಜಿಲ್ಲಾ ಶಾಖೆ | ಸದಸ್ಯರು |
| 14 | ಅಧ್ಯಕ್ಷರು, ಜಿಲ್ಲಾ ರೋಟರಿ ಸಂಘ, | ಸದಸ್ಯರು |
| 15 | ಸ್ವಯಂಸೇವಾ ಸಂಘದ ಪ್ರತಿನಿಧಿಗಳು | ಸದಸ್ಯರು |
| 16 | ಯುನಿಸೆಫ್ ಪ್ರತಿನಿಧಿ | ಸದಸ್ಯರು |
| 17 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ. | ಸದಸ್ಯ ಕಾರ್ಯದರ್ಶಿ |

**ಜಿಲ್ಲಾ ಮಟ್ಟದ ಲಸಿಕಾ ಕಾರ್ಯಪಡೆಯ ಪರಿಶೀಲನಾಂಶಗಳು: (Terms of Reference);-**

1. ನಿರಂತರ ಲಸಿಕಾ ಕಾರ್ಯಕ್ರಮದ (RI) ಪ್ರಗತಿಯನ್ನು ಅಂಕಿಅಂಶಗಳ ಕವರೇಜ್ ಡಾಟಾ (HMIS & MCTS) ಲಸಿಕೆಯಿಂದ ತಡೆಯಬಹುದಾದ ಖಾಯಿಲೆಗಳ (VPDS) ಸಂಭವಿಸುವಿಕೆ ಮುಂತಾದ ವಿವರಗಳನ್ನು ಕ್ಷೇತ್ರ (Block) ಮತ್ತು ನಗರ ಯೋಜನಾ ಘಟಕ (UPU)ಗಳಿಂದ ಪಡೆದುಕೊಳ್ಳುವುದು.
2. ಹೆಚ್ಚಿನ ಅಪಾಯದ ಪ್ರದೇಶಗಳಲ್ಲಿ ಅಗತ್ಯತೆಯ ಮೇಲೆ ನಿರಂತರ ಲಸಿಕಾ ಕಾರ್ಯಕ್ರಮದ ಗುಣಮಟ್ಟ, ಉಪ ವಿಭಾಗ ಮಟ್ಟದಲ್ಲಿ ಖಾಲಿ ಹುದ್ದೆಗಳಿಗೆ ವ್ಯಾಸಂಗಿಕ ಯೋಜನೆ, ತರಬೇತಿ ಸ್ಥಾನಮಾನ, ಲಸಿಕೆ ವಿತರಣಾ ಸರಪಳಿಗಳು ಮುಂತಾದ ಕಡೆ ನಿರ್ದಿಷ್ಟ ಗಮನ ಹರಿಸುವುದು.
3. ನಿರಂತರ ಲಸಿಕಾ ಕಾರ್ಯಕ್ರಮದಲ್ಲಿ ಬೇಡಿಕೆ ಉತ್ಪತ್ತಿ ಮತ್ತು ಸಮುದಾಯದ ಸಹಭಾಗಿತ್ವದ ಪ್ರಯತ್ನಗಳ ಪ್ರಭಾವಗಳನ್ನು ಪರಿಶೀಲಿಸುವುದು.
4. ನಿರಂತರ ಲಸಿಕಾ ಕಾರ್ಯದಲ್ಲಿ ರೋಗ ನಿರೋಧಕವನ್ನು ವಿಸ್ತರಿಸುವಿಕೆ ಮತ್ತು ಗುಣಮಟ್ಟವನ್ನು ಹೆಚ್ಚಿಸುವ ಬಗ್ಗೆ ನಿರ್ಧಿಷ್ಟವಾದ ಸೂಕ್ತವಾದ ಕಾಲಬದ್ದ ಕ್ರಮಗಳನ್ನು ನಿರ್ಧರಿಸುವುದು.
5. ಎಲ್ಲಾ ಆರೋಗ್ಯೇತರ ಇಲಾಖೆಗಳನ್ನು ಬಳಸಿಕೊಂಡು ನಿರಂತರ ಲಸಿಕಾ ಕಾರ್ಯದ ವಿಸ್ತಾರದ ಸುಧಾರಣೆಗಾಗಿ ಅವರ ಬೆಂಬಲವನ್ನು ಖಾತ್ರಿಪಡಿಸಿಕೊಳ್ಳುವುದು.
6. ಹಿಂದಿನ ಸಭೆಗಳಲ್ಲಿ ಕೈಗೊಂಡ ನಿರ್ಧಾರಗಳ ಮೇಲೆ ತೆಗೆದುಕೊಂಡ ಕ್ರಮದ ವರದಿಗಳನ್ನು ಪರಿಚಲಿಸುವುದು.

